



## ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ
ಸಂಶೋಧನಾ ಸಂಪ್ರಬಂಧ



# "ಡಾ॥ ಸಿದ್ಧಲಿಂಗಯ್ಯನವರ ಕಾವ್ಯದಲ್ಲಿ ಕ್ರಾಂತಿಕಾರಿ ಚಿಂತನೆಗಳು"

**(ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಕಪ್ಪುಕಾಡಿನ ಹಾಡು)**



**ಗಿರಿಯಪ್ಪ. ಎಂ.**
ಸಂಶೋಧನಾ ವಿದ್ಯಾರ್ಥಿ
ನೋಂದಣಿ ಸಂಖ್ಯೆ : KVMBKS-00330

ಮಾರ್ಗದರ್ಶಕರು

**ಡಾ. ಕೆ.ವಿ. ಚಂದ್ರಣ್ಣಗೌಡ** ಎಂ.ಎ., ಎಲ್.ಎಲ್.ಬಿ., ಪಿಎಚ್.ಡಿ.,
ಉಪಪ್ರಾಚಾರ್ಯರು, ಮುಖ್ಯಸ್ಥರು
ಕನ್ನಡ ವಿಭಾಗ, ವಿ.ವಿ.ಪುರಂ ಸಂಜೆ ಕಾಲೇಜು
ಕೆ.ಆರ್. ರಸ್ತೆ, ಬೆಂಗಳೂರು-04





**ಕಾವ್ಯಮಂಡಲ**
ನಂ. 13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-560004

2009

786

## ದೃಢೀಕರಣ ಪತ್ರ

ಗಿರಿಯಪ್ಪ.ಎಂ. ರವರು ಎಂ.ಫಿಲ್. ಪದವಿಗಾಗಿ ಬರೆದು ಸಿದ್ಧಪಡಿಸಿರುವ **''ಡಾ. ಸಿದ್ಧಲಿಂಗಯ್ಯನವರ ಕಾವ್ಯದಲ್ಲಿ ಕ್ರಾಂತಿಕಾರಿ ಚಿಂತನೆಗಳು'' (ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಕಪ್ಪುಕಾಡಿನ ಹಾಡು)** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ, ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

786

ಮಾರ್ಗದರ್ಶಕರು

**ಡಾ. ಕೆ.ವಿ. ಚಂದ್ರಣ್ಣಗೌಡ**

ಎಂ.ಎ.,ಎಲ್.ಎಲ್.ಬಿ.,ಪಿಎಚ್.ಡಿ.,

ಉಪಪ್ರಾಚಾರ್ಯರು, ಮುಖ್ಯಸ್ಥರು

ಕನ್ನಡ ವಿಭಾಗ, ವಿ.ವಿ.ಪುರಂ ಸಂಜೆ ಕಾಲೇಜು

ಕೆ.ಆರ್. ರಸ್ತೆ, ಬೆಂಗಳೂರು-04

ಸ್ಥಳ : ಬೆಂಗಳೂರು

ದಿನಾಂಕ : 30-09-2009

786

# ಪ್ರಮಾಣ ಪತ್ರ

**"ಡಾ. ಸಿದ್ಧಲಿಂಗಯ್ಯನವರ ಕಾವ್ಯದಲ್ಲಿ ಕ್ರಾಂತಿಕಾರಿ ಚಿಂತನೆಗಳು" (ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಕಪ್ಪುಕಾಡಿನ ಹಾಡು)** ಎಂಬ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು **ಡಾ. ಚಂದ್ರಣ್ಣಗೌಡ** ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವಾಗಿ ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ : ಬೆಂಗಳೂರು
ದಿನಾಂಕ : 30-09-2009

**ಗಿರಿಯಪ್ಪ. ಎಂ.**
**ಸಂಶೋಧನಾ ವಿದ್ಯಾರ್ಥಿ**

# ಪರಿವಿಡಿ

## ಪೀಠಿಕೆ

ಭಾರತ ದೇಶದಲ್ಲಿ ಬದುಕುತ್ತಿರುವ ಮಾನವರು ಶ್ರೇಣಿಕೃತ ಜಾತಿ ವ್ಯವಸ್ಥೆಯ ಬಲೆಯೊಳಗೆ ಸಿಲುಕಿ ಸಂಪ್ರದಾಯ ಶರಣರಾಗಿ ಬದುಕುತ್ತಿದ್ದರು. ಇಂತಹ ಹೀನಾಯ ಅಥವಾ ಗುಲಾಮಗಿರಿ ವ್ಯವಸ್ಥೆಯಲ್ಲಿ ತಮ್ಮ ಜೀವನದ ಆಯುಷ್ಯವನ್ನು ಕಳೆಯಬೇಕೆಂಬುದು ಕೆಲವು ಕನ್ನಡ ಸಾಹಿತ್ಯ ಬರಹಗಾರರ ಉದ್ದೇಶವಾಗಿತ್ತು. ಈ ಸಾಹಿತ್ಯ ಬರಹಗಾರರು ತುಳಿತಕ್ಕೊಳಗಾದ ಸಮುದಾಯವನ್ನು ಗಮನಿಸದೆ ತಮ್ಮದೇ ಆದ ಸಿದ್ಧಮಾದರಿಯ ವ್ಯವಸ್ಥೆಯನ್ನು ಪೋಷಿಸುತ್ತಾ ಬಂದರು. ಈ ರೀತಿಯ ಶ್ರೇಣಿಕೃತ ಜಾತಿ ವ್ಯವಸ್ಥೆಯಿಂದ ತುಂಬಾ ಅವಮಾನ, ನೋವು, ಜಾತಿ ನಿಂದನೆ, ಸಾಮಾಜಿಕ ಅಸಮಾನತೆ, ಜೀತಪದ್ಧತಿ, ಉಳ್ಳವರು ಇಲ್ಲದವರ ಮೇಲೆ ನಡೆಸುತ್ತಿರುವ ನಿರಂತರ ದೌರ್ಜನ್ಯ ಮತ್ತು ಗುಲಾಮಗಿರಿಯ ಸಂಕೋಲೆಗಳಿಂದ ಬಿಡುಗಡೆ ಹೊಂದಲು ಪ್ರಯತ್ನಿಸಿದ ಸಾಹಿತ್ಯ ಪ್ರಕಾರ ಸೃಷ್ಟಿಯಾಯಿತು.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹಲವು ಸಾಹಿತ್ಯಘಟ್ಟಗಳು ಸೃಷ್ಟಿಯಾಗಿದ್ದರೂ, ಕನ್ನಡ ಸಾಹಿತ್ಯ ಬರವಣಿಗೆಯಲ್ಲಿನ ಆಲೋಚನಾ ಕ್ರಮವನ್ನೇ ಬದಲಿಸಿದಂತಹ ಪ್ರಮುಖ ಸಾಹಿತ್ಯ ಘಟ್ಟವೆಂದರೆ ಅದು ೭೦ರ ದಶಕದಲ್ಲಿ ನಿರ್ಮಾಣಗೊಂಡಂತಹ 'ದಲಿತ ಸಾಹಿತ್ಯ' ಘಟ್ಟವಾಗಿದೆ. ಇದುವರೆಗೂ ರಚನೆಗೊಂಡಿದ್ದಂತಹ ಸಾಹಿತ್ಯಕ್ಕಿಂತ ವಿಭಿನ್ನವಾಗಿ ರಚನೆಗೊಂಡ ಸಾಹಿತ್ಯವೇ ದಲಿತ ಸಾಹಿತ್ಯವಾಗಿದೆ.

## ದಲಿತ ಸಾಹಿತ್ಯ

ಸುಮಾರು ೭೦ರ ದಶಕದಲ್ಲಿ ಕಾಣಿಸಿಕೊಂಡಂತಹ ಸಾಹಿತ್ಯದ ಹೊಸ ದನಿಯಾಗಿ ದಲಿತ ಸಾಹಿತ್ಯ ರೂಪುಗೊಂಡಿತು. ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಅಸಮಾನತೆಗೊಳಗಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಜನಾಂಗಗಳ ಬದುಕು ಈ ದಶಕದ ಸಾಹಿತ್ಯಕ್ಕೆ ಪ್ರಮುಖವಾಗಿ ವಸ್ತುವಾಗತೊಡಗಿತು. ಇದುವರೆವಿಗೂ ಅಕ್ಷರದಿಂದ ವಂಚಿತರಾಗಿದ್ದ ಜನತೆಗೆ ೧೯೫೦ರಲ್ಲಿ ಜಾರಿಯಾದ ಭಾರತದ ಸಂವಿಧಾನದ ಫಲವಾಗಿ ಇಡೀ ದಲಿತ ಜನಾಂಗಕ್ಕೂ ವಿದ್ಯೆಯಲ್ಲಿ ಪಾಲು ದೊರೆಯಲು ಸಾಧ್ಯವಾಯಿತು.

ಕರ್ನಾಟಕದಲ್ಲಿ ದಲಿತ ಸಾಹಿತ್ಯ ರಚನೆಗೊಳ್ಳಬೇಕಾದರೆ ಮೂಲ ಕಾರಣ ಭಾರತಾದ್ಯಂತ ದಲಿತ ಚಳುವಳಿಯನ್ನು ಪ್ರಾರಂಭಿಸಿ ತಮ್ಮ ತತ್ವ ಸಿದ್ಧಾಂತಗಳನ್ನು ಸಾರಿದ

ಡಾ. ಅಂಬೇಡ್ಕರ್‌ರವರ ವಿಚಾರಧಾರೆಗಳು, ದಲಿತ ವಿದ್ಯಾವಂತ ಯುವಕರು ರಾಜಕೀಯವಾಗಿ ಆರ್ಥಿಕವಾಗಿ ಮತ್ತು ಸೈದ್ಧಾಂತಿಕವಾಗಿ ತಮ್ಮ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಲು ಪ್ರಚೋದಿಸಿತು. ಭಾರತೀಯ ಹಿಂದೂಸಮಾಜದ ಉಸಿರುಗಟ್ಟುವ ವ್ಯವಸ್ಥೆಯೊಳಗೆ ಬದುಕುತ್ತಿದ್ದಂತಹ ದಲಿತರು ತಮ್ಮ ಜಾತಿಗಳನ್ನು ಬಹಿರಂಗಗೊಳಿಸಲು ಹಿಂಜರಿಯುವಂತಹ ವ್ಯವಸ್ಥೆ ನಿರ್ಮಾಣಗೊಂಡಿತ್ತು. ಇಂತಹ ಸಾಮಾಜಿಕ ವ್ಯವಸ್ಥೆಯೊಳಗೆ ಬದುಕುತ್ತಿದ್ದು ಬುದ್ಧಿಜೀವಿಗಳು ಎನಿಸಿಕೊಂಡಿದ್ದಂತಹ ಹಲವು ಬರಹಗಾರರು ಕೆಳಜಾತಿಗಳ ವಿಮೋಚನೆಯ ಬಗ್ಗೆ ಕಿಂಚಿತ್ತೂ ಚಿಂತಿಸದಂತಹ ಸಂದರ್ಭದಲ್ಲಿ ನೊಂದ ಮನಗಳಿಗೆ ಭರವಸೆಯನ್ನು ತುಂಬುವ, ಬಾಯಿಲ್ಲದವರಿಗೆ ಬಾಯಾಗಿ ಸಾಮಾಜಿಕ ತುಳಿತಕ್ಕೆ ಒಳಗಾದಂತಹ ಕೆಳ ಜಾತಿಯ ಜನರು ತಮ್ಮ ನಿಜವಾದ ಅನುಭವಗಳನ್ನು ತಮ್ಮ ಬರವಣಿಗೆಯ ಮೂಲಕ ಅಭಿವ್ಯಕ್ತಗೊಳಿಸಲು ರಚಿತವಾದಂತಹ ಸಾಹಿತ್ಯವೇ 'ದಲಿತ ಸಾಹಿತ್ಯ' ವಾಯಿತು.[೧]

ಡಾ. ಯು.ಆರ್. ಅನಂತಮೂರ್ತಿಯವರು ಹೇಳುವಂತೆ ಹುಟ್ಟಿನ ಕಾರಣಕ್ಕಾಗಿ ತಮ್ಮ ಸಂಸ್ಕೃತಿ, ಜಾತಿಯ ಬಗ್ಗೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ದಾಸ್ಯಕ್ಕೊಳಗಾಗಿ ಅವಮಾನದಿಂದ ಬದುಕುತ್ತಿರುವವರು ರಚಿಸಿದ ಸಾಹಿತ್ಯವೆಲ್ಲವೂ ದಲಿತ ಸಾಹಿತ್ಯವಾಗುತ್ತದೆ ಎಂದಿದ್ದಾರೆ.[೨] ಅಂದರೆ ಸಾಮಾಜಿಕ, ಆರ್ಥಿಕ ಅಸಮಾನತೆಗೆ ಒಳಗಾಗಿ, ತಮ್ಮ ಬದುಕಿನುದ್ದಕ್ಕೂ ನೋವುಂಡವರ ಗಟ್ಟಿಯಾದ ಧ್ವನಿಯೇ ದಲಿತ ಸಾಹಿತ್ಯ. ಇಂತಹ ಗಟ್ಟಿ ಧ್ವನಿ ಮೊದಲು ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿದ್ದು ಕನಕದಾಸರ 'ಕೀರ್ತನೆಗಳಲ್ಲಿ' ಅವರ ಕೃತಿಯಾದ ರಾಮಧಾನ್ಯ ಚರಿತೆ' ಯನ್ನು ಅಧ್ಯಯನ ಮಾಡಿದಾಗ ಕಂಡುಬರುವ ವರ್ಗ ಸಂಘರ್ಷದ ಗುಣಗಳೇ ಮುಂದೆ ೭೦ರ ದಶಕದಲ್ಲಿ ದಲಿತ ಸಾಹಿತ್ಯ ಸೃಷ್ಟಿಯಾಗಲು ಕಾರಣವಾಯಿತೆನ್ನಬಹುದು.[೩]

ದಲಿತ ಸಾಹಿತ್ಯವೆಂಬುದು ಸಮಾಜದಲ್ಲಿ ನಿಕೃಷ್ಟವಾಗಿ ಬದುಕುತ್ತಿದ್ದಂತಹವರ ಮೇಲೆ ನಡೆಯುತ್ತಿದ್ದಂತಹ ನಿರಂತರ ದಬ್ಬಾಳಿಕೆಯನ್ನು ಪ್ರಶ್ನಿಸುವ ಒಂದು ಸಾಹಿತ್ಯ ಪ್ರಕಾರವಾಯಿತು. ಜೊತೆಗೆ ನೊಂದ ಜನರಲ್ಲಿ ಆಶಾಕಿರಣವನ್ನು ಮೂಡಿಸುವ ಮತ್ತು ನಿರಂತರ ದೌರ್ಜನ್ಯ ದಬ್ಬಾಳಿಕೆಯಿಂದ ಅವರನ್ನು ಬಿಡುಗಡೆಗೊಳಿಸಲು ರಚಿತವಾದಂತಹ ಸಾಹಿತ್ಯವಾಯಿತು. ಸಮಾಜದೊಡನೆ ಬೆರೆತು ಬದುಕುತ್ತಿರುವಾಗ ಯಾರು ಸವಲತ್ತುಗಳಿಂದ

ವಂಚಿತರಾಗಿದ್ದರೋ ಅಂತಹವರು ತಮ್ಮ ಹಕ್ಕುಗಳಿಗಾಗಿಯೇ ಹೋರಾಡಲು ಸ್ಫೂರ್ತಿ ತುಂಬುವ ಸಾಹಿತ್ಯವಾಗಿ ದಲಿತ ಸಾಹಿತ್ಯ ರಚಿತವಾಯಿತು.

ಒಟ್ಟಾರೆಯಾಗಿ ಇಡೀ ದೇಶದ ದಲಿತರ ಸ್ಥಿತಿಯನ್ನು ಒಮ್ಮೆ ಅವಲೋಕಿಸಿದರೆ ಶ್ರೇಣೀಕೃತ ಜಾತಿ ವ್ಯವಸ್ಥೆಯೊಳಗೆ ಸಿಲುಕಿ ಅಸಮಾನತೆಗೊಳಗಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ವಿದ್ಯೆ, ಆಸ್ತಿ, ಅಧಿಕಾರ ಮುಂತಾದ ಎಲ್ಲಾ ಸವಲತ್ತಿನಿಂದ ವಂಚಿತರಾಗಿ ಸುಮಾರು ೨೫೦೦ ವರ್ಷಗಳ ಕಾಲ ಉಸಿರುಗಟ್ಟುವ ವ್ಯವಸ್ಥೆಯಲ್ಲಿ ಬದುಕುವ ಸ್ಥಿತಿ ನಿರ್ಮಾಣವಾಗಿತ್ತು. ಅಕ್ಷರ ಕಲಿಕೆಯಿಂದ ವಂಚಿತರಾದ ಇಡೀ ದಲಿತ ಜನಾಂಗ ಮಾನಸಿಕವಾಗಿ ಮತ್ತು ದೈಹಿಕವಾಗಿ ಗುಲಾಮರಾಗಿ ಬದುಕುವಂತಹ ಪರಿಸ್ಥಿತಿ ನಿರ್ಮಾಣಗೊಂಡಿತ್ತು. ಇಂತಹ ಪರಿಸ್ಥಿತಿಯನ್ನು ತಿಳಿಗೊಳಿಸಿ ತುಳಿತಕ್ಕೊಳಗಾದ ಜನತೆಗೆ ವಿಮೋಚನೆಯ ಹಾದಿಯನ್ನು ತೋರಲು ಹಲವಾರು ನಾಯಕರುಗಳು ಮತ್ತು ಬರಹಗಾರರು ಶ್ರಮಿಸಿದರು.

ಮಹಾತ್ಮ ಜ್ಯೋತಿಬಾಪುಲೆಯಂತಹ ವ್ಯಕ್ತಿ ಭಾರತದೇಶದಲ್ಲಿ ಜನಿಸದಿದ್ದರೆ ದಲಿತರ (ಅಸ್ಪೃಶ್ಯರ) ಬದುಕು ಇನ್ನಷ್ಟು ಅಂಧಕಾರದಲ್ಲಿರಬೇಕಾಗಿತ್ತು. ಅವರು ಅಸ್ಪೃಶ್ಯರಿಗದಾಗಿ ಮೊದಲು ಶಿಕ್ಷಣ ನೀಡಲು ಶ್ರಮಿಸಿದರೆ, ದಲಿತರ ವಿಮೋಚನೆಗಾಗಿ ದೇಶದಾದ್ಯಂತ ಚಳುವಳಿ ನಡೆಸಿದ ಡಾ. ಅಂಬೇಡ್ಕರ್‌ರವರು ಹೋರಾಡಿದರು. ತಮಿಳುನಾಡಿನಲ್ಲಿ 'ದ್ರಾವಿಡ ಕಳಗಂ'ನಾಯಕ ಪೆರಿಯಾರ್ ರಾಮಸ್ವಾಮಿ ನಾಯ್ಕರ್‌ರವರ ಹೋರಾಟ, ಕೇರಳದ ಶ್ರೀ ನಾರಾಯಣ ಗುರುರವರ ದಲಿತ ಜನಾಂಗದ ಪರವಾದ ಚಿಂತನೆಗಳು ಇಡೀ ದೇಶದಾದ್ಯಂತ ಹರಡುತ್ತಾ ದಲಿತರ ವಿಮೋಚನೆಯ ದಾರಿಯನ್ನು ಹಂತಹಂತವಾಗಿ ತೋರಿಸುತ್ತಾ ಬಂದವು.

ಇದೇ ರೀತಿಯಲ್ಲಿ ಕರ್ನಾಟಕದಲ್ಲಿ ೧೯೭೦ರ ದಶಕದಲ್ಲಿ ಇದುವರೆವಿಗೂ ರಚಿತಗೊಂಡಿದ್ದಂತಹ ಸಾಹಿತ್ಯ ಪ್ರಕಾರಕ್ಕಿಂತ ಹೊಸದೊಂದು ಮಾದರಿಯ ಬೆಂಕಿಯನ್ನು ಉಗುಳುವ ರೀತಿಯಲ್ಲಿ, ಓದುಗರಿಗೆ ತಮ್ಮ ಓದಿನ ಜೊತೆಯಲ್ಲಿಯೇ ಸಿಟ್ಟು, ಆಕ್ರೋಶ, ಬದಲಾವಣೆಯ ಮನಸ್ಸು ಸೃಷ್ಟಿಗೊಳ್ಳುವಂತಹ ಸಾಹಿತ್ಯ ಸೃಷ್ಟಿಯಾಯಿತು. ಇದುವರೆವಿಗೂ ರಚನೆಯಾಗಿದ್ದ ಸಾಹಿತ್ಯಕ್ಕಿಂತ ವಿಭಿನ್ನವಾದ ಶೈಲಿಯನ್ನು ಬಳಸುತ್ತಾ ಇಡೀ ನಾಡಿನಲ್ಲಿ

ಜಡವಸ್ತುವಿಂತೆ ಉಸಿರಾಟದ ಬೊಂಬೆಗಳಂತೆ ಬದುಕುತ್ತಿದ್ದ ಜನರಲ್ಲಿ ಕ್ರಾಂತಿಯ ಕಿಡಿಗಳನ್ನು ಹಚ್ಚುವ ಸಾಹಿತ್ಯ ನಿರ್ಮಾಣಗೊಂಡಿತು. ಅಂತಹ ಸಾಹಿತ್ಯವು ಯಾರ ತುಳಿತಕ್ಕೊಳಗಾಗಿ ಬದುಕುತ್ತಿದ್ದರೋ ಅವರ ನಡುವೆಯೇ ಹುಟ್ಟಿಕೊಂಡಂತಹ ಸಾಹಿತ್ಯವಾಯಿತು. ಕರ್ನಾಟಕದಲ್ಲಿ ದಲಿತರು ಕೇವಲ ಹಂದಿ, ನಾಯಿಗಳಿಗೂ ಕಡೆಯಾಗಿ ಬದುಕುತ್ತಿದ್ದ ಸಂದರ್ಭದಲ್ಲಿ ದಲಿತ ಜನಾಂಗದಲ್ಲಿಯೇ ಹುಟ್ಟಿ ಅವರ ದುಃಖ ದುಮ್ಮಾನಗಳನ್ನು ತಮ್ಮ ಕಾವ್ಯದ ವಸ್ತುವಾಗಿಸಿಕೊಂಡು ರಚಿತವಾದ ಸಾಹಿತ್ಯವೇ ದಲಿತ ಸಾಹಿತ್ಯವಾಯಿತು.

### ಸಿದ್ಧಲಿಂಗಯ್ಯನವರ ಬರವಣಿಗೆಯ ಅಗತ್ಯತೆಗಳು/ತಲ್ಲಣಗಳು

ಸುಮಾರು ೭೦ರ ದಶಕದಲ್ಲಿ ಇಡೀ ದಲಿತರ ಜೀವನದ ಸಮಗ್ರ ಚಿತ್ರಣವನ್ನೇ ತಮ್ಮ ಬರವಣಿಗೆಯ ವಸ್ತುವನ್ನಾಗಿಸಿಕೊಂಡು ಕಾವ್ಯವನ್ನು ಬರೆಯಲು ಪ್ರಾರಂಭಿಸಿದವರೇ ಡಾ. ಸಿದ್ಧಲಿಂಗಯ್ಯನವರು. ಇವರು ಪ್ರಮುಖವಾಗಿ ಒಬ್ಬ ಸಾಹಿತ್ಯದ ಅಭಿರುಚಿಯುಳ್ಳ ವ್ಯಕ್ತಿಯಾಗಿದ್ದರೂ ಸಹ ಇದುವರೆಗೂ ರಚಿತವಾಗಿದ್ದಂತಹ ಸಾಹಿತ್ಯ ಬರವಣಿಗೆಯ ಶೈಲಿಯನ್ನೇ ಅನುಸರಿಸದೆ ಹೊಸ ಶೈಲಿಯಲ್ಲಿ ಕಾವ್ಯವನ್ನು ಬರೆದದ್ದು ಒಂದು ವಿಶೇಷವಾಗಿದೆ. ಇವರು ತಮ್ಮ ಬರವಣಿಗೆಯಲ್ಲಿ ದಲಿತರ ಬದುಕನ್ನೇ ತನ್ನ ಕಾವ್ಯದ ವಸ್ತುವನ್ನಾಗಿಸಿಕೊಳ್ಳುವ ಅಗತ್ಯವಾದರೂ ಏನು? ಮತ್ತು ಇವರ ಬರವಣಿಗೆಯ ಕಾಲದ ಪ್ರಮುಖ ತಲ್ಲಣಗಳೇನು ಎಂಬುದು ಪ್ರಮುಖ ವಿಷಯವಾಗುತ್ತದೆ.

ಸಿದ್ಧಲಿಂಗಯ್ಯನವರು ತನ್ನ ಬರವಣಿಗೆಯನ್ನು ಅಷ್ಟು ತೀಕ್ಷ್ಣವಾಗಿ ಬರೆಯಲು ಅವರನ್ನು ಪ್ರಚೋದಿಸಿದ್ದು ಕುವೆಂಪುರವರ ಕ್ರಾಂತಿಕಾರಿ ಚಿಂತನೆಗಳು ಅವರ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಹಾಗೂ 'ಮಂತ್ರಮಾಂಗಲ್ಯ' ಕೃತಿಗಳು ಜೊತೆಗೆ ಸಿದ್ಧಲಿಂಗಯ್ಯನವರ ಬಾಲ್ಯಜೀವನದಲ್ಲಿ ನಡೆದ ಘಟನೆಗಳು ಮತ್ತಷ್ಟು ಅವರನ್ನು ಬರೆಯಲು ಪ್ರಚೋದಿಸುತ್ತವೆ. ಜಮೀನ್ದಾರರ ಹೊಲದಲ್ಲಿ ಕೂಲಿನಾಲಿಗಾಗಿ ಬದುಕುತ್ತಿದ್ದ ದಲಿತರ ಜೀವನದ ಸ್ಥಿತಿ, ಅಕ್ಷರಜ್ಞಾನದಿಂದ ವಂಚಿತರಾಗಿ ಬದುಕುತ್ತಿದ್ದ ದಲಿತ ಜನಾಂಗದ ಬದುಕು ಬಡತನವನ್ನೇ ಹಾಸುಂಡು ಉಸಿರಾಡುತ್ತಿದ್ದ ಬಗೆ, ದಲಿತರು ತೊಡುತ್ತಿದ್ದ ಹರಕುಬಟ್ಟೆಗಳ ಸ್ಥಿತಿ, ಇವರನ್ನು ಗಾಢವಾಗಿ ಪ್ರಭಾವಿಸಿ ಕಾವ್ಯ ಬರೆಯಲು ಪ್ರಚೋದಿಸಿದವು.[೬]

ಸಿದ್ದಲಿಂಗಯ್ಯನವರ ಬಾಲ್ಯದ ಬಡತನದ ಪದ್ಧತಿಯು ಬರಗಾಲದ ಛಾಯೆ 'ಅಲ್ಲಲ್ಲಿ ಉಳ್ಳವರು ಮಾಡುವ ಪರಗಳ ಹತ್ತಿರ ಹೋಗಿ ಊಟಕ್ಕಾಗಿ ಅಲೆಯುವ ಅಲ್ಲಿ ಜಾತಿ ನಿಂದೆಗೆಗೊಳಗಾಗಿ ಅಪಮಾನಕ್ಕೊಳಗಾಗಿ ಎಲ್ಲೋ ಮೂಲೆಯಲ್ಲಿ ಕುಳಿತು ಊಟಮಾಡುವ ಪ್ರಸಂಗಗಳು'[3] ಸಿದ್ಧಲಿಂಗಯ್ಯನವರ ಮೇಲೆ ಅಗಾಧವಾದ ಪರಿಣಾಮ ಬೀರಿದವು. ಅಸ್ಪೃಶ್ಯತಾ ಆಚರಣೆಯಲ್ಲಿ ಶೋಷಣೆಗೊಳಗಾಗಿ ಬದುಕುತ್ತಿದ್ದ ಮತ್ತೊಂದು ಪ್ರಸಂಗ ಅವರು ಬಾಲಕನಾಗಿದ್ದಾಗ ಒಂದು ದಿನ ಬೀದಿಯಲ್ಲಿ ಜೋರಾಗಿ ಓಡುತ್ತಿದ್ದು ಎದುರಿಗೆ ಬರುತ್ತಿದ್ದ ಸವರ್ಣೀಯರ ಕೈಗೆ ಅಕಸ್ಮಾತ್ ಸಿದ್ದಲಿಂಗಯ್ಯನವರ ಕೈ ತಾಕಿದ್ದು ಅದರಿಂದ ಕೋಪಗೊಂಡು ಆ ವ್ಯಕ್ತಿ ನಿಂತುಬಿಟ್ಟಿದ್ದು. ತಕ್ಷಣ ಆತನ ಅಜ್ಜ ಸವರ್ಣೀಯರ ಕೋಪಕ್ಕೆ ಈತ ತುತ್ತಾಗುವನೆಂದು ಹೆದರಿ, ಮುಂದು ಯಾವಾಗಲೂ ನೀನು ಬರಬಾರದೆಂದು ಹೇಳಿದ್ದು[4] ಸಿದ್ಧಲಿಂಗಯ್ಯನವರ ಸಾಹಿತ್ಯ ಬರವಣಿಗೆಯ ಮೇಲೆ ಅಪಾರ ಪರಿಣಾಮ ಬೀರಿತು.

ಡಾ. ಸಿದ್ಧಲಿಂಗಯ್ಯನವರ ಬರವಣಿಗೆಯ ಮುಖ್ಯ ತಲ್ಲಣಗಳೆಂದರೆ ಸಮಾಜದಲ್ಲಿ ಆಚರಿಸುತ್ತಿದ್ದ ಅಸ್ಪೃಶ್ಯತೆ ಹೋಗಲಾಡಿಸಬೇಕು. ದಲಿತರು ವಿದ್ಯಾಭ್ಯಾಸದಿಂದ ವಂಚಿತರಾಗಿ ಇಂದಿಗೂ ಜೀತಪದ್ಧತಿಯಲ್ಲಿ ಸಿಲುಕಿ ನರಳುತ್ತಿರುವವರನ್ನು ಅದರಿಂದ ಬಂಧಮುಕ್ತಗೊಳಿಸಬೇಕು. ದಲಿತ ಜನಾಂಗದ ಮೇಲೆ ನಡೆಯುತ್ತಿರುವಂತ ದೌರ್ಜನ್ಯಗಳನ್ನು ಖಂಡಿಸುವುದು ಸಾರ್ವಜನಿಕ ಸ್ಥಳಗಳಿಗೆ ಮುಕ್ತ ಅವಕಾಶವೇ ಇಲ್ಲದ ಪರಿಸ್ಥಿತಿಯಲ್ಲಿದ್ದ ದಲಿತರಿಗೆ ಮುಕ್ತವಾಗಿ ಪ್ರವೇಶವನ್ನು ಒದಗಿಸುವಂತಹ ಹವಣಿಕೆಯಲ್ಲಿ ಸಿದ್ಧಲಿಂಗಯ್ಯನವರ ಬರವಣಿಗೆಗಳು ರಚಿತವಾದವು.

ಸಿದ್ಧಲಿಂಗಯ್ಯನವರ ಬರವಣಿಗೆಯ ಮತ್ತೊಂದು ಅಗತ್ಯತೆಯೆಂದರೆ ಶತಮಾನಗಳಿಂದಲೂ ಶೋಷಣೆಗೊಳಗಾದ ಜನರಿಗೆ ವಿಮೋಚನೆಯನ್ನು ನೀಡುವುದರ ಜೊತೆಗೆ ಇಡೀ ದಲಿತ ಸಮುದಾಯವನ್ನು ಜಾಗೃತಗೊಳಿಸುವುದಾಗಿತ್ತು. ಇವರ ಬರವಣಿಗೆಯಲ್ಲಿ ಹಲವು ಕವಿತೆಗಳಲ್ಲಿರುವ ಬಿಡುಗಡೆಯ ಮಾತುಗಳು ರಾಜಕೀಯ ಜಾಗೃತಿ, ಆರ್ಥಿಕ ಅಸಮಾನತೆಯ ಕುರಿತ ವಿಚಾರಗಳು, ಶೈಕ್ಷಣಿಕ ಕ್ಷೇತ್ರದ ಬೆಳವಣಿಗೆಯ ಪ್ರಚೋದನಕಾರಿ ವಾಕ್ಯಗಳು ಇದುವರೆವಿಗೂ ಮೂಲಭೂತ ಸೌಕರ್ಯಗಳಿಂದ

ವಂಚಿತರಾಗಿದ್ದ ದಲಿತ ಸಮುದಯಕ್ಕೆ ವಿಮೋಚನೆಯ ಮಾರ್ಗತೋರಿಸುವುದೇ ಬಹು ಮುಖ್ಯ ಅಗತ್ಯವಾಗಿತ್ತು.

ಸಿದ್ಧಲಿಂಗಯ್ಯನವರು ತಮ್ಮ ಕಾವ್ಯದಲ್ಲಿ ಇಡೀ ವ್ಯವಸ್ಥೆಯನ್ನು ಪ್ರಶ್ನಿಸುವ ಜೊತೆಗೆ ಅಂಧರಾಗಿ ಕುಳಿತಿದ್ದ ಜನಾಂಗಗಳಲ್ಲಿ ಕ್ರಾಂತಿಯ ಕಿಡಿಯನ್ನು ಹಚ್ಚುವ, ಇಡೀ ದಲಿತ ಜನಾಂಗವನ್ನೇ ಒಗ್ಗೂಡಿಸುವ, ತಮ್ಮತಮ್ಮ ಹಕ್ಕುಗಳಿಗಾಗಿ ಹೋರಾಡಲು ಸಿದ್ಧಪಡಿಸುವುದು ಇವರ ಬರವಣಿಗೆಯ ಮುಖ್ಯ ಉದ್ದೇಶವಾಗಿತ್ತು. ಜೊತೆಗೆ ದಲಿತ ಜನಾಂಗಕ್ಕೆ ಅವರದೇ ಆದಂತಹ ಒಂದು ಸಂಸ್ಕೃತಿ ಆಚಾರ ವಿಚಾರ, ರೂಢಿ ಸಂಪ್ರದಾಯ, ಉಡುಗೆ-ತೊಡುಗೆ, ಆಹಾರ ಹೀಗೆ ದಲಿತ ಬದುಕಿನ ಹಲವು ಚಿತ್ರವನ್ನು ದಲಿತ ಜನಾಂಗದಲ್ಲಿ ಸಾರ್ವತ್ರಿಕರಣಗೊಳಿಸುವುದು ಸಿದ್ಧಲಿಂಗಯ್ಯನವರ ಬರವಣಿಗೆಯ ಮುಖ್ಯವಾದ ಉದ್ದೇಶವಾಗಿತ್ತು. ಶ್ರೇಣೀಕೃತ ಜಾತೀ ವ್ಯವಸ್ಥೆಯ ಬಲೆಯಲ್ಲಿ ಸಿಲುಕಿ ಜಾತಿಯೊಳಗೆಯೇ ಹಲವು ಉಪಜಾತಿಗಳಾಗಿ ವಿಂಗಡಿಸಿ ಒಬ್ಬರು ಮತ್ತೊಬ್ಬರನ್ನು ಕಂಡು ಕಚ್ಚಾಡುತ್ತಿರುವ ಎಲ್ಲಾ ಉಪಜಾತಿಗಳನ್ನು ಒಂದೇ ಚೌಕಟ್ಟಿನಡಿ ತಂದು ಕೂಡಿಸುವ ಅಗತ್ಯತೆ ಇತ್ತು.

ಸಾಮಾಜಿಕ ವ್ಯವಸ್ಥೆಯೊಳಗೆ ರಾಜಕೀಯವಾಗಿ ತುಂಬಾ ನಿರ್ಲಕ್ಷ್ಯಕ್ಕೊಳಗಾಗಿ ಬದುಕುತ್ತಿದ್ದ ಜನಾಂಗಕ್ಕೆ ಹೋರಾಟದ ಮನೋಭಾವವನ್ನು ಸೃಷ್ಟಿಸುವುದು, ಇಡೀ ದಲಿತ ಸಮುದಾಯವನ್ನು ಒಂದೇ ವೇದಿಕೆಗೆ ತರುವುದು. ದಲಿತರು ಕರ್ನಾಟಕದಲ್ಲಿ ಒಂದು ಶಕ್ತಿಯಾಗಿ ಹೊರಹೊಮ್ಮುತ್ತಿದ್ದಾರೆ ಎಂದು ಇಡೀ ಸಮಾಜಕ್ಕೆ ತೋರಿಸುವುದು ಅನಿವಾರ್ಯವಾಗಿತ್ತು.

ಸಿದ್ಧಲಿಂಗಯ್ಯನವರ ಬರವಣಿಗೆಯ ಮತ್ತೊಂದು ಮುಖ್ಯ ಅಗತ್ಯತೆಯೆಂದರೆ ಹಿಂದಿನ ದಲಿತ ಸಮುದಾಯ ಇದುವರೆವಿಗೂ ಒಪ್ಪಿಕೊಂಡಿದ್ದಂತಹ ಸ್ಥಾನಗಳನ್ನು ಹೊಸ ದಲಿತ ಸಮುದಾಯ ಗುಲಾಮರಾಗಿ ಒಪ್ಪಿಕೊಳ್ಳಲು ತಯಾರಿಲ್ಲದಿರುವುದು ಸಿದ್ಧಲಿಂಗಯ್ಯನವರ ಬರವಣಿಗೆಯನ್ನು ಪ್ರಚೋದಿಸಿತು. ಹಾಗೂ ದಲಿತರೂ ಕೂಡ ಶ್ರೇಣೀಕೃತ ಜಾತಿವ್ಯವಸ್ಥೆಯಲ್ಲಿ ತಮ್ಮದೇ ಆದ ಹೊಸ ಮಾದರಿಯ ಸ್ಥಾನಗಳಿಸಲು ಹೋರಾಡಿದ್ದು ಅದರ ಬಗೆಗಿನ ಅರಿವನ್ನು ಮತ್ತು ಬಂಡಾಯದ ಕಹಳೆಯನ್ನೂದುವುದು

ಇವರ ೭೦ರ ದಶಕದ ದಲಿತ ಕಾವ್ಯದ ಬರವಣಿಗೆಯ ಅಗತ್ಯತೆಯನ್ನು ಕುರಿತು ಹೇಳುತ್ತದೆ. ಇವರ ಬರವಣಿಗೆಗೆ ಅಂದಿನ ಕಾಲಘಟ್ಟದಲ್ಲಿ ರಾಜಕೀಯ ಪುಢಾರಿಗಳು ದಲಿತರ ಬಗೆಗೆ ತೋರಿದ ನಿರ್ಲಕ್ಷ್ಯ ಮತ್ತು ತಾತ್ಸಾರ, ಅದರ ಬಗೆಗೆ ಇಡೀ ದಲಿತ ಸಮುದಾಯವನ್ನು ಜಾಗೃತ ಸಮುದಾಯವನ್ನಾಗಿ ಮಾಡಬೇಕು ಎಂದು ಬರೆಯಲು ಮುಂದಾದರು.

ಇವರು ತಮ್ಮ ಕಾವ್ಯವನ್ನು ಬರೆಯುವುದರ ಜೊತೆಗೆ ದಲಿತ ಜನಾಂಗವನ್ನು ಒಗ್ಗೂಡಿಸಿ ದಲಿತ ಚಳುವಳಿಯನ್ನು ಮಾಡುವ ಉದ್ದೇಶದಿಂದ ೧೯೭೫ರಲ್ಲಿ ತಮ್ಮ ಮೊದಲ ಕವನ ಸಂಕಲನವನ್ನು (ಹೊಲೆಮಾದಿಗರ ಹಾಡು) ಪ್ರಕಟಿಸಿದರು. ನಂತರ ದಲಿತ ಚಳುವಳಿಯನ್ನು ಪ್ರಾರಂಭಿಸುವುದರ ಮೂಲಕ ತಾವು ಬರೆದ ಕವನಗಳನ್ನೇ ಚಳುವಳಿಯ ಮುಖ್ಯ ಆಯುಧಗಳನ್ನಾಗಿ ಮಾಡಿಕೊಂಡು ೧೯೭೫ರಲ್ಲಿ ಬಿ. ಕೃಷ್ಣಪ್ಪ ದೇವನೂರು ಮಹಾದೇವರವರೊಡಗೂಡಿ 'ದಲಿತ ಸಂಘರ್ಷ ಸಮಿತಿ'ಯನ್ನು ಹುಟ್ಟುಹಾಕಿದರು. ಈ ವೇದಿಕೆಯಲ್ಲಿ ಹಾಡಿದ ಹಾಡುಗಳೇ ದಲಿತರ, ನೊಂದವರ ದನಿಯಾದವು. ಇದುವರೆವಿಗೂ ನೋವುಂಡವರಿಗೆ ಕಣ್ಣೀರೊರೆಸುವ ಅಸ್ತ್ರಗಳಾಗಿ ಸಿದ್ಧಲಿಂಗಯ್ಯನವರ ಕಾವ್ಯಗಳು ಅಗತ್ಯವಾಗತೊಡಗಿದವು.

## ಅಧ್ಯಾಯ -೧

# ಡಾ॥ ಸಿದ್ದಲಿಂಗಯ್ಯನವರ ಬರವಣಿಗೆಯ ಕಾಲದಲ್ಲಿ ದಲಿತರ ಬದುಕಿನ ಸ್ಥಿತಿಗತಿಗಳು

ಭಾರತಕ್ಕೆ ಆರ್ಯರ ಆಗಮನವಾದ ನಂತರ ಮನುವಾದಿ ಶ್ರೇಣೀಕೃತ ಜಾತಿವ್ಯವಸ್ಥೆ ಸೃಷ್ಟಿಯಾಗಿ ಭಾರತ ದೇಶದ ಬಹುಪಾಲು ಜನರು, ಮನುಧರ್ಮಶಾಸ್ತ್ರ ಸೃಷ್ಟಿಸಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಜಾತಿ ವ್ಯವಸ್ಥೆಯ ಬಲೆಯೊಳಗೆ ಸಿಲುಕಿ ಸುಮಾರು ೬೦೦೦ ಜಾತಿಗಳಾಗಿ ಒಡೆದು ಹಂಚಿಹೋಗಿದ್ದರ. ಇಂತಹ ಶ್ರೇಣೀಕೃತ ವ್ಯವಸ್ಥೆಯಲ್ಲಿ ಒಬ್ಬರನ್ನು ಮತ್ತೊಬ್ಬರು ನಿಕೃಷ್ಟವಾಗಿ ಕಾಣುವಂತಹ ಪರಿಸ್ಥಿತಿ ನಿರ್ಮಾಣಗೊಂಡು ಸುಮಾರು ೨೫೦೦ವರ್ಷಗಳ ಕಾಲ ಒಬ್ಬರು ಮತ್ತೊಬ್ಬರನ್ನು ಗುಲಾಮರನ್ನಾಗಿ ನಡೆಸಿಕೊಳ್ಳುವಂತಹ ಪರಿಸ್ಥಿತಿ ನಿರ್ಮಾಣವಾಯಿತು. ಮನುಧರ್ಮ ಶಾಸ್ತ್ರದ ಪ್ರಕಾರ ಶೂದ್ರರು ಮತ್ತು ಪಂಚಮರು (ದಲಿತರು) ವಿದ್ಯೆ ಕಲಿಯಬಾರದು. ಆಸ್ತಿಯಲ್ಲಿ ಪಾಲು ಹೊಂದಿರಬಾರದು ಎಂಬ ನಿಯಮ ಜಾರಿಯಾಗಿದ್ದು ಈ ನಿಯಮ ಸುಮಾರು ವರ್ಷಗಳ ಕಾಲ ಮುಂದುವರಿಯುತ್ತಲೇ ಬಂದಿತು.

ಸುಮಾರು ೧೬೦೦ ರಲ್ಲಿ ಭಾರತಕ್ಕೆ ಬ್ರಿಟೀಷರ ಆಗಮನವಾದ ಬಳಿಕ ಬ್ರಿಟೀಷರ ಆಡಳಿತದ ಫಲವಾಗಿ ೧೮/೧೯ನೇ ಶತಮಾನದಲ್ಲಿ ಶೂದ್ರರು ಮತ್ತು ದಲಿತರಿಗೆ ವಿದ್ಯೆಯಲ್ಲಿ ಪಾಲು ದೊರೆಯಿತು. ೧೯೫೦ರಲ್ಲಿ ದಲಿತರಿಗೆ ವಿದ್ಯೆಯಲ್ಲಿ ಪಾಲು ದೊರೆತರೂ ಸಹ ಸಾಮಾಜಿಕವಾಗಿ ದಲಿತರ ಮೇಲೆ ನಿರಂತರ ಶೋಷಣೆ ಮತ್ತು ದೌರ್ಜನ್ಯಗಳು ನಡೆಯುತ್ತಲೇ ಬಂದವು. ದಲಿತ ಹೆಣ್ಣುಮಕ್ಕಳ ಮೇಲೆ ಸವರ್ಣೀಯರ ಅತ್ಯಾಚಾರ, ಜೀತದಾಳುಗಳಾಗಿ ಅವರ ಹೊಲಗದ್ದೆಗಳಲ್ಲಿ ದುಡಿಸುವ ಪದ್ಧತಿ, ಗುಲಾಮರಂತೆ ಅವರನ್ನು ನಡೆಸಿಕೊಳ್ಳುವ ರೀತಿ ನಡೆಯುತ್ತಲೇ ಇತ್ತು. ದಲಿತರಿಗೆ ಸಂವಿಧಾನಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಸವಲತ್ತುಗಳು ದೊರೆಯಬೇಕು ಎಂದು ತೀರ್ಮಾನಿಸಿದ್ದರೂ ಸಹ ಸುಮಾರು ೧೯೭೦ರ ದಶಕದವರೆವಿಗೂ ದಲಿತ ಜನಾಂಗದವರು ಅವಿದ್ಯಾವಂತರಾಗಿಯೇ ಉಳಿದಿದ್ದರು. ಸಂವಿಧಾನಿಕವಾಗಿ ಇವರಿಗೆ ಸಿಗಬೇಕಾದ ಸವಲತ್ತುಗಳೆಲ್ಲವೂ ಸಿಗಲೇ ಇಲ್ಲ.

೧೯೭೦ಕ್ಕಿಂತ ಹಿಂದೆ ಮೂಕರಾಗಿ, ಬದುಕುತ್ತಿದ್ದಂತಹ ದಲಿತರಿಗೆ ಸಿದ್ಧಲಿಂಗಯ್ಯನವರ ಕಾವ್ಯ ದನಿಯಾಯಿತು. ದಿಕ್ಕೇ ಕಾಣದೆ ಕಂಗಾಲಾಗಿದ್ದ ದಲಿತರಿಗೆ ವಿಮೋಚನೆಯ ದಾರಿಯನ್ನು ತೋರದಿದ್ದರೂ ಬದುಕಿನ ಬಗೆಗೆ ತಕ್ಷಣದ ತೀರ್ಮಾನ ತೆಗೆದುಕೊಳ್ಳುವ ಬದುಕಿನಲ್ಲಿ ಭರವಸೆಯನ್ನು ಮೂಡಿಸುವ ಕಾವ್ಯವಾಗಿ ಹೊರಹೊಮ್ಮಿದವು. ದಲಿತರ ಬದುಕನ್ನೇ ಅರ್ಥವಾಗುವ ರೀತಿಯಲ್ಲಿ ಅನಾವರಣಗೊಳಿಸುವ ಇವರ ಕಾವ್ಯ ದಲಿತರ ಬದುಕಿಗೆ ಮಾರ್ಗಸೂಚಿಯಾದವು.

ದಲಿತರ ಸಾಮಾಜಿಕ ಬದುಕನ್ನು ಸಿದ್ಧಲಿಂಗಯ್ಯನವರು ತಮ್ಮ ಕವನ ಸಂಕಲನವಾದ 'ಹೊಲೆ ಮಾದಿಗರ ಹಾಡು' 'ಸಾವಿರಾರು ನದಿಗಳು', 'ಕಪ್ಪುಕಾಡಿನ ಹಾಡಿನಲ್ಲಿ', ಅನಾವರಣಗೊಳಿಸುತ್ತಾ ದಲಿತರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಆಚರಣೆಗಳು, ಶೋಷಣೆಗಳು ಎಲ್ಲವನ್ನೂ ತಮ್ಮ ಕಾವ್ಯದಲ್ಲಿ ಹಿಡಿದಿಡುತ್ತಾ ದಲಿತರಲ್ಲಿ ಕ್ರಾಂತಿಕಾರಿ ಮನೋಭಾವವನ್ನು ಬಿತ್ತುತ್ತಾ ಎಲ್ಲರನ್ನು ಒಗ್ಗೂಡಿಸಲು ಶ್ರಮಿಸಿರುವುದನ್ನು ಕಾಣಬಹುದು.

**ಹೊಲೆಮಾದಿಗರ ಹಾಡು**

ಸುಮಾರು ೧೯೭೫ರಲ್ಲಿ ರಚಿತವಾಗಿ ಪ್ರಕಟವಾದಂತಹ ಸಿದ್ಧಲಿಂಗಯ್ಯನವರ ಮೊದಲ ಕವನ ಸಂಕಲನವೇ 'ಹೊಲೆಮಾದಿಗರ ಹಾಡು' ಇದರಲ್ಲಿ ಸುಮಾರು ೨೧ಪದ್ಯಗಳು ಸಂಕಲಿತಗೊಂಡಿದ್ದರೂ ಇವೆಲ್ಲವುಗಳು ಇಂದು ಕ್ರಾಂತಿಕಾರಿ ಗೀತೆಗಳಾಗಿ ದಲಿತ ಜನಾಂಗದಲ್ಲಿ ಆಸೆ ಮತ್ತು ಭರವಸೆಗಳನ್ನು ಹುಟ್ಟಿಸುವ ಕಾವ್ಯಗಳಾಗಿ ಹೊರಹೊಮ್ಮಿರುವುದನ್ನು ಕಾಣಬಹುದು.

'ಹೊಲೆಮಾದಿಗರ ಹಾಡು' ಹೆಸರೇ ಹೇಳುವಂತೆ ಇದೊಂದು ಅಸ್ಪೃಶ್ಯರ ಹಾಡಾಗಿದೆ. ಈ ಕೃತಿಯು ಕನ್ನಡ ಸಾಹಿತ್ಯದ ಸಾಂಸ್ಕೃತಿಕ ದಿಕ್ಕನ್ನು ಬದಲಿಸುತ್ತಾ, ದಲಿತರ ನೋವು ಚಾರಿತ್ರಿಕ ಸುಲಿಗೆಯ ಪೂರ್ಣಕತೆಯನ್ನು ಎಲ್ಲರ ಮುಂದೆ ಬಿಚ್ಚಿಡುವುದಾಗಿದೆ. ಒಂದು ಸಿದ್ಧ ಮಾದರಿಯಂತೆ ನಿರ್ಮಾಣಗೊಂಡಿರುವ ವ್ಯವಸ್ಥೆಗೆ ಸೆಡ್ಡು ಹೊಡೆದು ಅದರ ವಿರುದ್ದ ಮುಖ ಮಾಡಿ ನಿಲ್ಲುವಂತಹ ಎದೆಗಾರಿಕೆಯನ್ನು ಹೊಂದಿರುವುದರ ಸಂಕೇತವಾಗಿ ಈ ಹೊಲೆಮಾದಿಗರ ಹಾಡು ರಚಿತಗೊಂಡಿದೆ. ಸಿದ್ಧಲಿಂಗಯ್ಯನವರ ಕಾವ್ಯಗಳು

ಹೋರಾಟದ ಕಾವ್ಯಗಳಾಗಿಯೇ ಹೊರಹೊಮ್ಮಿದವು. ಹೋರಾಟವೆಂಬುದು ಸಮುದಾಯದ ಹೋರಾಟವಾದ್ದರಿಂದ ಅವುಗಳು ಸಮೂಹದ ಹಾಡುಗಳಾಗಿಯೇ ಹೊರ ಹೊಮ್ಮಿರುವುದನ್ನು ಕಾಣಬಹುದಾಗಿದೆ. ಜೊತೆಗೆ ಹೊಲೆ ಮಾದಿಗರಹಾಡು ೨೦ನೇ ಶತಮಾನದ ದಲಿತರ ಜಾನಪದ ಕಾವ್ಯವೆನ್ನುವಂತೆಯೂ ಇದೆ ಎಂದು ಹೇಳಬಹುದು.

ಸಿದ್ಧಲಿಂಗಯ್ಯನವರು 'ಹೊಲೆ ಮಾದಿಗರ ಹಾಡು' ಕವಿತೆಯನ್ನು ಬರೆದಾಗ ಅವು ಕೇವಲ ಕಾವ್ಯವಾಗಿ ಹೊರಹೊಮ್ಮದೆ 'ಬೆಂಕಿಯಉಂಡೆಗಳಾಗಿ ಸಿಟ್ಟು, ಆಕ್ರೋಶ, ಸಂಪ್ರದಾಯದ ಬಗೆಗೆ ತಾತ್ಸಾರ ಮನೋಭಾವ ಎಲ್ಲವೂ ವ್ಯಕ್ತವಾಗತೊಡಗಿದವು.[೭] ಸಿದ್ಧಲಿಂಗಯ್ಯನವರ ಕಾವ್ಯ ರಚನೆಯಲ್ಲಿಯೇ ದಲಿತರ ಬದುಕಿನ ಸ್ಥಿತಿಗತಿಗಳು ಅನಾವರಣಗೊಂಡಿರುವುದನ್ನು ಗಮನಿಸಬಹುದು.

'ಹಸಿವಿನಿಂದ ಸತ್ತೋರು ಸೈಜುಗಲ್ಲು ಹೊತ್ತೂರು
ವದೆಸಿಕೊಂಡು ವರಗಿದೋರು ನನ್ನ ಜನಗಳು'

ಹೆಸರೇ ಸೂಚಿಸುವಂತೆ ಕವನದ ಶೀರ್ಷಿಕೆಯೇ 'ನನ್ನ ಜನಗಳು'ಎನ್ನುವಾಗ ಸಿದ್ಧಲಿಂಗಯ್ಯನವರು ದಲಿತ ಸಮುದಾಯದ ಕವಿಯಾಗಿಯೇ ಹುಟ್ಟಿಅವರ ಸ್ಥಿತಿಗತಿ ಕುರಿತು ಬರೆಯುವಲ್ಲಿ ಮುಂದಾದವರು ಎನಿಸುತ್ತದೆ. ಪದ್ಯದ ಪ್ರತಿ ಸಾಲಿನಲ್ಲಿಯೂ ದಲಿತ ಜನಾಂಗದ ಬಡತನ, ಹಸಿವು, ಜೀತಪದ್ಧತಿಯ ದಾಸ್ಯ, ಒಡೆಯರ ಹೊಲದಲ್ಲಿಯು ಜೀತಗಾರಿಕೆ, ಅವರ ದುಡಿಮೆಯ ಫಲವನ್ನೆಲ್ಲಾ ಬೇರಾರೋ ಕಸಿದು ಇವರನ್ನು ಮತ್ತಷ್ಟು ಹಸಿವಿನ ಕೂಪಕ್ಕೆ ತಳ್ಳುವಂತಹ ಸ್ಥಿತಿಯನ್ನು ಕವನದ ಪ್ರತೀ ಸಾಲಿನಲ್ಲಿಯೂ ಸಾರಿ ಹೇಳುವಂತೆ ಅಂದಿನ ಅವರ ಬದುಕಿನ ಮತ್ತು ದುಡಿಮೆಯ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ. ಹಾಗೆಯೇ 'ಒಂದು ಮೂಳೆಯ ಹಾಡು' ಪದ್ಯದ ಸಾಲುಗಳಲ್ಲಿ ಬರುವ 'ಕೂಗ್ತೀನಿ, ಸಿಡಿತೀನಿ, ಮುಂದೆ ಮನುಷ್ಯ ಆಯ್ತಿನಿ' ಎನ್ನುವ ಮಾತುಗಳು ಅಂದಿನ ದಲಿತರು ಸವರ್ಣೀಯರ ಧಮನಕ್ಕೊಳಗಾಗಿ ಸಹಿಸಲಾಗದ ನೋವುಂಡಂತಹವರು, ಅಂತಹ ಪರಿಸ್ಥಿತಿಯಲ್ಲಿ ಬದುಕುತ್ತಿರುವ ದಲಿತರ ಸ್ಥಿತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿರುತ್ತಾರೆ.

ಸಮಾಜದೊಳಗಡೆಯೇ ನಡೆಯುತ್ತಿರುವ ಜಾತಿ ನಿಂದನೆ ಅಸ್ಪೃಶ್ಯತಾ ಆಚರಣೆಯನ್ನು ಸೂಕ್ಷ್ಮವಾಗಿ ಕಟ್ಟಿಕೊಡುವ ಕಾವ್ಯದ ಸಾಲುಗಳೆಂದರೆ

*ಎಲ್ಲಾರು ದೇವ್ರ ಮಕ್ಳು ಅಂತಾರೆ*
*ಹೊಲೇರ್ನ ಕಂಡ್ರೆ ಹಾವ್ ಕಂಡಂಗಾಡ್ತಾರೆ* *(ಒಂದು ಪದ)*

ಈ ಮಾತಿನಲ್ಲಿ ಅಂಧಿನ ದಲಿತರ ಬದುಕಿನ ಸ್ಥಿತಿಯನ್ನು ಸವರ್ಣೀಯರು ಅವರನ್ನು ಮುಟ್ಟಿಸಿಕೊಳ್ಳಲು ಹಿಂಜರಿಯುತ್ತಿದ್ದಂತಹ ವ್ಯವಸ್ಥೆಯನ್ನು ಕವಿ ತನ್ನ ಕಾವ್ಯ ಶೈಲಿಯಲ್ಲಿ ಮನದಟ್ಟು ಮಾಡಲು ಪ್ರಯತ್ನಿಸುತ್ತಾರೆ. 'ಸತ್ತೋ ಗೋರಾ' ಪದ್ಯದಲ್ಲಿ ಬರುವಂತಹ ದಲಿತರ ಕೂಳಿಲ್ಲದ ಹಸಿವಿನ ಬವಣೆಯ ಚಿತ್ರಗಳು ಮೂಡಿ ಬಂದಿರುವುದನ್ನು ಗಮನಿಸಬಹುದು. ಅವರ ಬರಹದ ಸಾಲಿನ ನಿಮ್ಗ್ ಕೇಳ್ಸಲ್ವೇನ್ರಲೇ ನವ್ ಕೂಳಿಲ್ಲದ್ ಕೂಗು' ಮಾತುಗಳು ಅಂದಿನ ದಲಿತರು ಆಹಾರಕ್ಕಾಗಿಯೇ ಪರದಾಡುತ್ತಿದ್ದಂತಹ ಸ್ಥಿತಿಯನ್ನು ಅದಕ್ಕಾಗಿಯೇ ಹೋರಾಟ ನಡೆಸಲು ಮುಂದಾಗಿ ನುಗ್ಗುತ್ತಿದ್ದಂತಹ ಸನ್ನಿವೇಶವನ್ನು ಕಟ್ಟಿಕೊಡುತ್ತದೆ.

ಕವಿಯ 'ಗಲ್ಡಗಳು ಪದ್ಯದಲ್ಲಿ ದಲಿತರು ಉಸಿರುಗಟ್ಟಿ ಬದುಕುತ್ತಿರುವ ವ್ಯವಸ್ಥೆಯನ್ನು ಕುರಿತು ಚಿತ್ರಿಸಿದ್ದಾರೆ. ಜಾತೀ ವ್ಯವಸ್ಥೆಯ ಸಮಾಜದಲ್ಲಿ ಸ್ವತಂತ್ರವಾಗಿ ಬಾಳಲು ಅವಕಾಶ ಮಾಡಿಕೊಡದ ಪರಿಸ್ಥಿತಿಯನ್ನು ಸಿದ್ಧಲಿಂಗಯ್ಯನವರು ಚಿತ್ರಿಸುತ್ತಾ ಬಂದಿದ್ದಾರೆ. ದಲಿತರು ಬದುಕುತ್ತಿರುವ ಕೊಳಚೆ ಪ್ರದೇಶ ಅಲ್ಲಿ ಪಕ್ಕದಲ್ಲಿಯೇ ಇರುವ ಮೋರಿ ಮೋರಿಯಲ್ಲಿ ಬರುವ ಮಲಮೂತ್ರ ವಿಸರ್ಜನೆಯಿಂದ ಗಬ್ಬುನಾರುವ ವಾಸನೆಯಲ್ಲಿ ದಲಿತಜನಾಂಗವು ಬದುಕುತ್ತಿರುವ ಸ್ಥಿತಿಯನ್ನು 'ಗಲ್ಡಗಳು' ಪದ್ಯದಲ್ಲಿ ವಿವರಿಸುತ್ತಾರೆ. ಒಟ್ಟಿನಲ್ಲಿ ಈ ಸಂಕಲನದ 'ಸತ್ತೋ ಗೋರ, ಗಲ್ಡಗಳು, ಹಬ್ಬ, ಸುಂಟರಗಾಳಿ, ಹಣೆಬರವು ಎಂಬ ನಾಟಕವು' ಮುಂತಾದ ಕವನಗಳೆಲ್ಲವೂ ಶೋಷಿತ ಸಮುದಾಯದ ಸಂಕಟ, ಆಕ್ರೋಶ ಆವೇಶಗಳನ್ನು, ವ್ಯವಸ್ಥೆಯ ಮೋಸ, ಕುತಂತ್ರಗಳನ್ನು ಶೋಷಣೆಯ ಪರಿಯನ್ನು ಅತ್ಯಂತ ಮಾರ್ಮಿಕವಾಗಿ ನಮ್ಮ ಕಣ್ಣಿಗೆ ಕಟ್ಟುವಂತೆ ಹೃದಯ ತಟ್ಟುವಂತೆ ಕಟ್ಟಿಕೊಟ್ಟಿದ್ದಾರೆ.[೮]

*ದಾರ ರುದ್ರಾಕ್ಷಿಗಳ ಭಾರ ಬಿಗಿತಕೆ ಬೆದರಿ*
*ದೂರ ಸರಿಯುತಲಿಹುದು ನೈಜಧರ್ಮ* *(ಸುಂಟರಗಾಳಿ)*

ಎನ್ನುವ ಸಾಲುಗಳು ಮೇಲುವರ್ಗದ ಶ್ರೇಷ್ಠತೆಯ ಮಡಿವಂತಿಕೆಯಲ್ಲಿ ದಲಿತರ ಬದುಕು ಸಂಪೂರ್ಣವಾಗಿ ಹೀನಾಯಸ್ಥಿತಿಗೆ ಬಂದು ಅವರ ನೈಜ ಬದುಕಿನ ಚಿತ್ರಣವೇ

ಇಲ್ಲದಂತಾಗಿದೆ ಎಂಬುದನ್ನು ಒತ್ತಿಹೇಳುತ್ತದೆ. 'ಕನ್ನಡವ್ವನಿಗೆ' ಪದ್ಯದಲ್ಲಿ ಕವಿಯು ರೈತರ ಬೆವರಹನಿಯ ಮಹತ್ವವನ್ನು ಕಾರ್ಮಿಕರ ದುಡಿಮೆಯ ಸ್ಥಿತಿಯನ್ನು ಚಿತ್ರಿಸುತ್ತಾ ಅವರಿಗೆ ಆಗುತ್ತಿರುವ ಅನ್ಯಾಯವನ್ನು ತೋರಿಸಿಕೊಡುತ್ತಾರೆ.

*ರೈತರ ಬೆವರ ನೆಕ್ಕಿ ನೆಕ್ಕೊದಿದ*
*ಜಮೀನುದಾರರ ಜೊತೆಗಾತಿ*
*ಕಾರ್ಮಿಕರ ರಕ್ತದ ರವೆವುಂಡೆಯ ಉಂಡು ಕಾರಿನ*
*ಹಾರನ್ನಿನಂತೆ ತೇಗುವ ಮಾಲೀಕರ ಮಿಂಡಗಾತಿ* *(ಕನ್ನಡವ್ವನಿಗೆ)*

ಎನ್ನುವ ಸಾಲಿನಲ್ಲಿ ಜಮೀನುದಾರರ ಪರವಾದ ವ್ಯವಸ್ಥೆ ಬಡವರ ಬೆವರಿನ ಶ್ರಮವನ್ನೇ ನೀರಿನಂತೆ ಕುಡಿಯುತ್ತಿರುವ, ಅವರ ರಕ್ತದಿಂದ ಮಾಡಿದ ಉಂಡೆಯನ್ನೇ ರವೆವುಂಡೆಯಂತೆ ತಿನ್ನುತ್ತಾ ಭೂಮಾಲೀಕರ ಪರವಾಗಿರುವ ವ್ಯವಸ್ಥೆಯನ್ನು ಪ್ರಶ್ನಿಸುತ್ತಿರುವ ಕವಿಯು ಅಂದಿನ ಕಾರ್ಮಿಕರ ಸ್ಥಿತಿಯನ್ನು ಕುರಿತು ವಿವರವಾಗಿ ತಿಳಿಸುತ್ತಾರೆ.

ಕವಿಯ 'ಹಣೆಬರವು ಎಂಬ ನಾಟಕವು' ಎಂಬ ಕವಿತೆಯಲ್ಲಿ ಶ್ರಮಿಕವರ್ಗದವರು ದಲಿತರು, ದುಡಿಯುವವರಿಗೂ ಯಾವುದೇ ಮೈಲಿಗೆಯಿಲ್ಲ. ಅವರು ದೇವರ ಗುಡಿಯನ್ನು ಕಟ್ಟುವಾಗ ಮೈಲಿಗೆಯಿಲ್ಲ, ಅದನ್ನು ಮುಟ್ಟಿದ ಮಾತ್ರಕ್ಕೆ ಮೈಲಿಗೆಯಾಗುವುದೇ ? ಎಂಬ ಪ್ರಶ್ನೆಯನ್ನು ಎತ್ತುತ್ತಿರುವ ಕವಿಯು ಅಲ್ಲಿನ ಶೋಷಣೆಯ ವಿರುದ್ಧ ನಿಲ್ಲುವ ದಲಿತರ ಅಸಹಾಯಕ ಸ್ಥಿತಿಯನ್ನು ಚಿತ್ರಿಸುತ್ತಾ ಬಂದಿದ್ದಾರೆ.

ಅ : ಹೊರಗಡೆ ಆಗಿದ್ದೀರಾ?
ಆ : ಇಲ್ಲ
ಅ : ಮತ್ಯಾಕೆ ಅತ್ತಿತ್ತ ಒತ್ರುಸ್ಕಂಡು ನಿಂತಿದ್ದೀರಾ ಗುಡಿತಾವು ?
ಆ : ಗೊತ್ತಿಲ್ಲಾ ?
ಅ : ಬೆವರಲ್ಲಿ ಬಣ್ಣ ಬಳ್ದು ರಕ್ತದಲ್ಲಿ ನೆಲಸಾರ್ಸಿ
ಮೂಳೇಲಿ ಗ್ವಾಡೆ ಕಟ್ಟಿ ಗುಡಿಚಂದ ಮಾಡಿದೋರು
ನೀವಲ್ಲವೆ ? ನಿಮ್ಮ ತೋಳಲ್ಲವೆ?

(ಹಣೆಬರವು ಎಂಬ ನಾಟಕವು)

ಈ ಸಾಲುಗಳು ದಲಿತರು ದೇವಾಲಯವನ್ನು ಕಟ್ಟುವವರಾಗಿದ್ದರೇ ಹೊರತು ಅದರ ಒಳಗಡೆ ಪ್ರವೇಶ ಮಾಡುವಂತಹ ಅರ್ಹತೆ ಅಂದಿನ ಕಾಲದಲ್ಲಿ ಇರಲಿಲ್ಲ. ಸುಮ್ಮನೆ ಕುಳಿತು ಗುಡಿ ಕಟ್ಟುವುದನ್ನು ನೋಡುತ್ತಿದ್ದವನಿಗೆ ಗುಡಿ ಕಟ್ಟಿದ ಮೇಲೆ ಒಳಗೆ ಸ್ವಾತಂತ್ರ್ಯ ಆದರೆ ಬೆವರು ಹರಿಸಿ ರಕ್ತ ಬಸಿದು ಗುಡಿಕಟ್ಟಿದ ದಲಿತರು ಗುಡಿಯಿಂದ ಹೊರನಿಲ್ಲುವ ಪರಿಸ್ಥಿತಿ ಇತ್ತು ಎಂಬುದನ್ನು ಕವಿ ತೋರಿಸಿಕೊಡುತ್ತಿದ್ದಾರೆ.

ಕವಿಯು 'ಕ್ರಾಂತಿ ಪದ' ಕವಿತೆಯನ್ನು ಬರೆಯುತ್ತಾ ದೇವರು, ಧರ್ಮ, ಪೂಜಾರಿ ಪುರೋಹಿತ ಮುಂತಾದ ಹೆಸರಿನಲ್ಲಿ ದಲಿತರ ಮೇಲೆ ನಡೆಯುತ್ತಿರುವ ನಿರಂತರ ಶೋಷಣೆಯನ್ನು ಚಿತ್ರಿಸಿದ್ದಾರೆ.

*ದೇವರುಗಳ ಪೂಜೆಯಲ್ಲಿ ಗುರುವರ್ಯರ ದಾಸ್ಯದಲಿ*
*ಇಹಲೋಕಕು ಪರಲೋಕಕು ಸೇತುವೆಯನು ಕಟ್ಟಿ*
*ಪರಮಾತ್ಮನ ಪರದೆಯಲಿ ಜೀವಾತ್ಮನಕಬಳಿಸುವ*
*ಕಡುಜಾಣರ ಕೊಂದು ತಿಂದು ಅನ್ಯಾಯವ ಮೆಟ್ಟಿ* *(ಕ್ರಾಂತಿಪದ)*

ಈ ಸಾಲಿನಲ್ಲಿ ಪುರೋಹಿತಶಾಹಿ ವರ್ಗವು ದೇವರು, ಗುರು, ಧರ್ಮ ಮುಂತಾದವುಗಳನ್ನು ಆಯುಧಗಳನ್ನಾಗಿ ಮಾಡಿಕೊಂಡು ಇಡೀ ದಲಿತ ಜನಾಂಗವನ್ನು ಅವರ ಮುಗ್ಧ ಮನಸ್ಸುಗಳನ್ನು ಕಲ್ಮಶಗೊಳಿಸುತ್ತಾ ಇಡೀ ದಲಿತ ಜನಾಂಗವನ್ನೇ ಮೇಲುವರ್ಗದ ದಾಸರನ್ನಾಗಿ ಮಾಡಿಕೊಂಡಿರುವಂತಹ ಸ್ಥಿತಿಯನ್ನು ಕವಿಯು ವಿವರಿಸುತ್ತಾ ತನ್ನ ಕಾವ್ಯದಲ್ಲಿ ವಿವರಿಸುತ್ತಾರೆ.

*ಅಸಮತೆಯ ಗುಡುಗಿನಲಿ ಸಂಕಟದ ಸಿಡಿಲಿನಲಿ*
*ಚಿಂದಿಬಟ್ಟೆಯಲೊಂದು ಮಿಂಚುಕಂಡು*
*ಧರ್ಮಗುರುವಿನ ಪೀಠ ಮುಗ್ಗರಿಸಿ ಮುರಿದಿತ್ತು*
*ದೈವಗುಡಿ ಜನರಮನೆ ಆಗುತ್ತಿತ್ತು* *(ಭವಷ್ಯದ್ಗೀತೆ)*

ಈ ಸಾಲುಗಳನ್ನು ಗಮನಿಸಿದಾಗ ಕವಿಯ ಬರವಣಿಗೆಯ ಕಾಲಘಟ್ಟದಲ್ಲಿ ಇದ್ದಂತಹ ಸಾಮಾಜಿಕ ಅಸಮಾನತೆಯನ್ನು ಅವರ ಹೃದಯಾಂತರಾಳದಲ್ಲಿ ಅಡಗಿರುವ ಕಣ್ಣೀರಿನ ವ್ಯಥೆಯನ್ನು ಚಿತ್ರಿಸಿದರು. ಆ ನಂತರದ ಸಾಲಿನಲ್ಲಿ ಬರುವ 'ಚಿಂದಿಬಟ್ಟೆಯಲ್ಲಿ ಮಿಂಚು ಕಂಡು' ಎನ್ನುವ ಮಾತು ಮುಂದಿನ ಬ ದುಕಿನಲ್ಲಿ ಭರವಸೆಯನ್ನು ತುಂಬುವ

ಬೆಳಕು ಬರುವುದು ಎಂಬುವ ಕುರುಹಾಗಿರುವುದನ್ನು ಗಮನಿಸಬಹುದು. ಜೊತೆಗೆ ಧರ್ಮಗುರುವಿನ ಪೀಠ ಅಂದರೆ ಇದುವರೆವಿಗೂ ಧರ್ಮದ ಹೆಸರೇಳಿ ಮೋಸಮಾಡುತ್ತಿದ್ದ ಬ್ರಾಹ್ಮಣಶಾಹಿ ವರ್ಗಕ್ಕೆ ಅವರ ಮಂತ್ರಗಳಿಗೆ ಪ್ರತಿಯಾಗಿ ಪ್ರತಿತಂತ್ರವನ್ನು ಹೊರಡುವ ಪರಿಸ್ಥಿತಿ ಬರುವುದು ಎಂಬ ಸೂಚನೆಯನ್ನು ಕವಿ ವಿವರಿಸುತ್ತಾ ಹೋಗುತ್ತಾರೆ.

ಡಾ. ಸಿದ್ಧಲಿಂಗಯ್ಯನವರ 'ಬೀಳು'ಕವಿತೆಯಲ್ಲಿ ದಲಿತರ ನೈಜ ಬದುಕಿನ ಚಿತ್ರಣವನ್ನು ಕಟ್ಟಿಕೊಡುವಂತಹ ಸಾಲುಗಳನ್ನು ಇಲ್ಲಿ ಕಾಣಬಹುದಾಗಿದೆ.

*ಎಣ್ಣೆ ಕಾಣದ ತಲೆಯ ಕೂದಲುಗಳೆದ್ದೆದ್ದು*
*ನರ್ತನವ ಗೈಯುತ್ತಿರೆ ಮೋದದಿಂದ*
*ಬರಿಹೊಟ್ಟೆ ಕೊರಗಿತ್ತು ಕೊಳೆ ಬಟ್ಟೆ ಹರಿದಿತ್ತು*
*ಪ್ರೇತಕಳೆ ಚಿಮ್ಮಿತ್ತು ವದನದಿಂದ* (ಬೀಳು)

ಈ ಸಾಲುಗಳು ದಲಿತರ ಹೊರವ್ಮೈಯ ಚಿತ್ರಣವನ್ನು ಮತ್ತು ಹಸಿವಿನ ಬವಣೆಯನ್ನು ಕಟ್ಟಿಕೊಡುತ್ತವೆ. ತಲೆಗೂದಲಿಗೆ ಎಣ್ಣೆಯನ್ನು ಹಾಕಲು ಸಾಧ್ಯವಾಗದ ದಲಿತರ ಸ್ಥಿತಿ, ಹಸಿವಿನಿಂದ ಅವರ ಹೊಟ್ಟೆ, ಬೆನ್ನು ಕಚ್ಚಿರುವ, ತೊಟ್ಟಿರುವ ಬಟ್ಟೆಯಲ್ಲಿಯೇ ಎಣಿಸಲಾರದಷ್ಟು ಸಮಸ್ಯೆಯ ತೂತುಗಳು ಗೋಚರಿಸುವ ಸ್ಥಿತಿಯನ್ನು ತೋರಿಸಿದ್ದಾರೆ.

*ಅನ್ನವಿಲ್ಲದ ಹೆಣ್ಣಿಗೆ ಕುಂಕುಮವು ಕಡುಕೇಡು*
*ಹಣೆಯಲ್ಲಿ ಬೆವರಹನಿ ಮಿನುಗುತ್ತಿತ್ತು*
*ಉಟ್ಟಸೀರೆಯ ಸೆರಗು ಎತ್ತೆತ್ತಲೋ ಏರಿ*
*ಬಡತನದ ಬಾವುಟವು ಹಾರುತ್ತಿತ್ತು* (ಬೀಳು)

ಈ ಸಾಲಿನಲ್ಲಿ ಕವಿಯು ದಲಿತ ಹೆಣ್ಣುಮಗಳೊಬ್ಬಳ ಬದುಕಿನ ಸ್ಥಿತಿಯನ್ನು, ತಿನ್ನಲು ಅನ್ನವಿಲ್ಲದ, ಉಳ್ಳವರ ಬಾಗಿಲಲ್ಲಿ ದುಡಿದರೂ ಅದಕ್ಕೆ ಸರಿಯಾದ ಸವಲತ್ತುಗಳು ಸಿಗದ ದಲಿತ ಹೆಣ್ಣುಮಗಳ ಸೀರೆಯು ಬಡತನದ ಕುರುಹಾಗಿ ಇಡೀ ದೇಶದ ಬಡತನವನ್ನೇ ತೋರಿಸುವಂತೆ ಅದೇ ಭಾರತದ ಬಾವುಟವಾಗಿ ಹಾರಾಡುವಂತಿದೆ ಎಂಬ ನೈಜ ಸ್ಥಿತಿಯನ್ನು ಕವಿ ಕೊಡುತ್ತಾರೆ. ದಿನನಿತ್ಯವೂ ಶ್ರಮದಿಂದ ದುಡಿಯುತ್ತಿರುವ ದಲಿತ ಮಹಿಳೆಯರ ಕಾಲುಗಳೆಲ್ಲ ಬರಿಗಾಲಿನಲ್ಲಿಯೇ ನಡೆದು ಮರಗಟ್ಟಿಕೊಂಡಿದೆ. ಕೈಗಳು ಬಳೆಯಿಲ್ಲದೆ ಬರಡು

ಮರದ ಕೊಂಬೆಗಳಂತೆ ಕಾಣುತ್ತಿವೆ ಎಂದು ದಲಿತ ಮಹಿಳೆಯ ಬದುಕಿನ ಚಿತ್ರಣವನ್ನು ಕವಿ ತಮ್ಮ ಕಾವ್ಯದಲ್ಲಿ ಚಿತ್ರಿಸುತ್ತಾ ಬಂದಿದ್ದಾರೆ.

ಕವಿಯು 'ನಾವು' ಎಂಬ ಕವನದಲ್ಲಿಯೂ ಸಹ ದಲಿತರ ಬದುಕಿನ ನೈಜ ಸ್ಥಿತಿಯನ್ನು ಕಟ್ಟಿಕೊಡುವಂತಹ ಜಾಣ್ಮೆಯನ್ನು ತೋರಿಸಿದ್ದಾರೆ. ದಲಿತರ ದುಡಿಮೆ, ದುಡಿಮೆಗೆ ಸಿಗದ ಪ್ರತಿಫಲ, ಕೂಳಿಲ್ಲದೆ ರಾತ್ರಿಯಲ್ಲೇ ಆಕಾಶದಲ್ಲಿರುವ ನಕ್ಷತ್ರಗಳನ್ನು ಎಣಿಸಲು ಸಾಧ್ಯವಾಗುವಂತಹ ಮನೆಯಲ್ಲಿ ಮಲಗುವ ಪರಿಸ್ಥಿತಿ ದುಡಿತಕ್ಕೆ ತಕ್ಕ ಪ್ರತಿಫಲ ಕೇಳಿದಾಗ ದೇವರು, ಭೂತ, ಧರ್ಮದ ಹೆಸರನ್ನು ಹೇಳುವ ಯಜಮಾನರ ಮೋಸದ ಪರಿ, ಇದನ್ನು ಮುಂದೊಂದು ದಿನ ತೀರಿಸುವೆ 'ಅನ್ಯಾಯಕ್ಕೆ ಅನ್ಯಾಯ, ಮುಯ್ಯಿಗೆ ಮುಯ್ಯಿ' ಮುಂದೆ ಕಾದಿದೆ ಎನ್ನುವುದರ ಜೊತೆಗೆ ಪುರೋಹಿತವರ್ಗ ಮತ್ತು ಶೂದ್ರ ಅಸ್ಪೃಶ್ಯ ವರ್ಗಗಳ ನಡುವಿನ ತಾರತಮ್ಯವನ್ನು ತೋರಿಸುತ್ತ ವರ್ಗ ಸಂಘರ್ಷವನ್ನು ನಮಗೆ ತೋರಿಸಲು ಪ್ರಯತ್ನಿಸುತ್ತಾರೆ. ಡಾ. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನದ ನಂತರ 'ಸಾವಿರಾರು ನದಿಗಳು' ಮತ್ತು ಕಪ್ಪುಕಾಡಿನ ಹಾಡು' ಗಳಲ್ಲಿಯೂ ದಲಿತರ ಬದುಕಿನ ಸ್ಥಿತಿಗತಿಗಳು ಅನಾವರಣಗೊಂಡಿರುವುದನ್ನು ಕಾಣಬಹುದಾಗಿದೆ.

**ಸಾವಿರಾರು ನದಿಗಳು**

ಡಾ.ಸಿದ್ಧಲಿಂಗಯ್ಯನವರ ಎರಡನೇ ಕವನ ಸಂಕಲನವಾದ 'ಸಾವಿರಾರು ನದಿಗಳು' ೧೯೭೯ರಲ್ಲಿ ಬಿಡುಗಡೆಗೊಂಡಿತು. ಈ ಕೃತಿಯಲ್ಲಿ ಬರುವಂತಹ ಸಾವಿರಾರು ನದಿಗಳು, ಬೆಲ್ಜಿಯ ಹಾಡು, ಕೆಂಪುಸೂರ್ಯ, ದಲಿತರು ಬರುವರು...., ಹೀಗೆ ಸುಮಾರು ೧೬ ಕವನಗಳಿಂದ ಆವೃತಗೊಂಡಿದೆ. ದಲಿತರೆಂದರೆ ಹೊಲೆ ಮಾದಿಗರು ಅವರೇ ಅಸ್ಪೃಶ್ಯರು ಎನ್ನುವ ಚಿತ್ರಣವನ್ನು ಹೋರಾಟವೆಂದರೆ ಅದು ಜಾತಿಜಾತಿಗಳ ನಡುವೆ ನಡೆಯುವ ಸಂಘರ್ಷವೆಂದು, ಶೋಷಣೆಯ ವಿರುದ್ಧ ನಡೆಯುವ ಹೋರಾಟವೆಂಬುದು ಈ ಕವನ ಸಂಕಲನದಲ್ಲಿ ವ್ಯಕ್ತವಾಗಿದೆ. ಈ ಕೃತಿಯ ಮೂಲ ಆಶಯ. ಶೋಷಣೆಗೊಳಗಾಗಿರುವ ಜಾತಿಗಳು ಸಾವಿರಾರು ನದಿಗಳಾಗಿ ಸೇರಿ ಸಂಘರ್ಷ ಮಾಡಬೇಕೆಂಬುದಾಗಿದೆ. ಇಲ್ಲಿ ಕವಿಯ ಮೂಲ ಆಶಯವಾಗಿದೆ. ಹೊಲೆ ಮಾದಿಗರ ಹಾಡು ಕೇವಲ ಅಸ್ಪೃಶ್ಯರಿಗೆ ಸೀಮಿತವಾಗಿದ್ದಂತೆ ಈ ಕವನಸಂಕಲನ ಸೀಮಿತಗೊಳ್ಳದೆ ಅಸ್ಪೃಶ್ಯರೂ, ರೈತರು,

ಕಾರ್ಮಿಕರೆಲ್ಲರನ್ನೂ ಸಂಘರ್ಷಕ್ಕೆ ಕರೆತರುವ ಆಶಯ ಹೊಂದಿದ್ದರಿಂದ ಇದಕ್ಕೆ 'ಸಾವಿರಾರು ನದಿಗಳು' ಎಂದು ಶೀರ್ಷಿಕೆಯನ್ನಿಡಲು ಸಾಧ್ಯವಾಯಿತು ಎಂದು ಕವಿ ಅಭಿಪ್ರಾಯ ಪಡುತ್ತಾರೆ.

'ಸಾವಿರಾರು ನದಿಗಳು' ಕವನ ಸಂಕಲನದಲ್ಲಿನ ಪದ್ಯಗಳು ಒಂದು ಲಯಗಾರಿಕೆಯಿಂದ ಕೂಡಿರುವುದರಿಂದ ಹರಿವ ನದಿ ನೀರಿಗೆ ಹೇಗೆ ಹಂಗಿಲ್ಲವೋ ಹಾಗೆಯೇ ಸಿದ್ಧಲಿಂಗಯ್ಯನವರ ಕಾವ್ಯಕ್ಕೆ ಯಾವುದೇ ಹಂಗಿಲ್ಲದೆ ಅದು ಭವಿಷ್ಯದ ನದಿಯಂತೆ ಹರಿಯುವ ನೊಂದ ಎಲ್ಲಾ ಮನಗಳಲ್ಲಿಯೂ ಕ್ರಾಂತಿಯ ಕಿಡಿಯನ್ನು ಹಚ್ಚುವ ಭೋರ್ಗರೆದು ಹರಿಯುವ ಸಾವಿರಾರು ನದಿಗಳ ಸಂಗಮವಾಗಿ ರೂಪುಗೊಂಡಿದೆ.[6]

ಕವಿಯು 'ಹೊಲೆಮಾದಿಗರ ಹಾಡು' ಕವನ ಸಂಕಲನವನ್ನು ಬರೆಯುವಾಗ ಅವರ ಕಾವ್ಯದ ವಸ್ತು ಕೇವಲ ದಲಿತರ ಬದುಕಿನ ಸ್ಥಿತಿಗತಿಗಳು ಮತ್ತು ಅದರ ವಿರುದ್ಧ ಬಂಡೇಳುವುದಾದರೆ, 'ಸಾವಿರಾರು ನದಿಗಳು' ಕಾವ್ಯ ಬರೆಯುವ ಹೊತ್ತಿಗೆ ದಲಿತರ ಜೊತೆಗೆ ರೈತರು ಮತ್ತು ಕೂಲಿ ಕಾರ್ಮಿಕರನ್ನು ತನ್ನ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡು ಬರೆಯಲು ಪ್ರಾರಂಭಿಸಿದರು. ಇಲ್ಲಿಯೂ ಸಹ ಕವಿಯು ಕೆಲವು ಕವನಗಳಲ್ಲಿ ದಲಿತರ ಬದುಕಿನ ಸ್ಥಿತಿಗತಿಗಳನ್ನು ಅವರ ಬದುಕಿನ ರೀತಿಯನ್ನು ಅನಾವರಣಗೊಳಿಸಿದ್ದಾರೆ.

'ಸಾವಿರಾರು ನದಿಗಳು' ಸಂಕಲನದಲ್ಲಿನ 'ನನ್ನ ಜನಗಳು' ಕವಿತೆಯಲ್ಲಿ ಕವಿಯು ತನ್ನ ಜನರು ಬದುಕುತ್ತಿರುವ ಸಾಮಾಜಿಕ ಸ್ಥಿತಿಯನ್ನು ಚಿತ್ರಿಸಿದ್ದಾರೆ.

*ಬೀದಿಯಲ್ಲಿ ಗಲ್ಲಿಯಲ್ಲಿ*
*ಬೇಲಿಮೆಳೆಯ ಮರೆಗಳಲ್ಲಿ*
*ಯಜಮಾನರ ಹಟ್ಟಿಯಲ್ಲಿ ಧಣಿ ಕೂರವ ಪಟ್ಟದಲ್ಲಿ*
*ಎಲ್ಲೆಲ್ಲೂ ನನ್ನ ಜನ ನೀರಿನಂತೆ ನಿಂತರು* *(ನನ್ನ ಜನಗಳು)*

ಕವಿಯು ಇಡೀ ನಾಡಿನ ಸಮಗ್ರ ಚಿತ್ರಣವನ್ನು ಗಮನದಲ್ಲಿಟ್ಟುಕೊಂಡು ತನ್ನ ಜನರನ್ನು ಪರಿಚಯಿಸುವ ಪ್ರಯತ್ನ ಮಾಡುತ್ತಾರೆ. ದಲಿತರು ವಾಸಿಸುವ ಬೀದಿಗಳು ಗಲ್ಲಿಗಲ್ಲಿಯಲ್ಲಿಯೂ, ಧಣಿಗಳ ದರಬಾರಿನ ನಡುವೆಯೂ ಎಲ್ಲಾ ಭಾಗದಲ್ಲಿಯೂ ದಲಿತರು ತಮ್ಮ ವೇದನೆಯನ್ನು ತುಂಬಿಕೊಂಡು ಬದುಕುತ್ತಿದ್ದಾರೆ ಎಂಬುದು ಕವಿತೆಯ

ಮೂಲ ಆಶಯವಾಗಿದೆ. ಇಲ್ಲಿ ಕವಿಯು ನೆನ್ನೆ ದಿನ ಎನ್ನುವ ಮಾತು ಹಿಂದಿನ ಎಲ್ಲಾ ಶೋಷಣೆಯನ್ನು ನೆನ್ನೆಯ ನೋವುಗಳನ್ನು ತಮ್ಮ ಮನದಲ್ಲಿ ಇಟ್ಟುಕೊಂಡು ಬರುತ್ತಿದ್ದಾರೆ ಎಂಬುದನ್ನು ಹೇಳಿದ್ದಾರೆ.

ಇಡೀ ರಾಷ್ಟ್ರದ ದಲಿತರ ಬದುಕಿನ ಸ್ಥಿತಿಯನ್ನು ತುಂಬಾ ರೋಷಾವೇಶದಿಂದ ಚಿತ್ರಿಸಿರುವ ಕವಿತೆಯೆಂದರೆ ಬೆಲ್ಚಿಯ ಹಾಡು' ಬಿಹಾರದ ಬೆಲ್ಚಿಗ್ರಾಮದಲ್ಲಿ ನಡೆದ ದಲಿತರ ಸಜೀವ ದಹನದ ಕತೆಯನ್ನು ವಸ್ತುವನ್ನಾಗಿಸಿಕೊಂಡಿರುವ[10] ಕವಿ ಕರ್ನಾಟಕದ ದಲಿತರ ಬದುಕಿನ ಸ್ಥಿತಿಯನ್ನು ತಿಳಿಸುತ್ತಾರೆ.

*ದೊಡ್ಡಗೌಡರ ಬಾಗಿಲೀಗೆ*
*ನಮ್ಮ ಮೂಳೆಯ ತ್ವಾರಣ*
*ನಮ್ಮ ಜನಗಳ ಕಾಲುಕೈಯ್ಯಿ*
*ಕಂಬ ಅವರ ಹಟ್ಟಿಗೆ* (ಬೆಲ್ಚಿಯ ಹಾಡು)

ಇಲ್ಲಿ ಕವಿ ಒಂದು ಜಾತಿಯನ್ನು ಸೂಚಕವಾಗಿಟ್ಟುಕೊಂಡು ಕಾವ್ಯವನ್ನು ರಚಿಸುವುದರ ಬದಲು ಇಡೀ ದೇಶದ ಭೂಮಾಲೀಕರ ಶ್ರೀಮಂತರ ಶೋಷಕರ, ಬಂಡವಾಳಗಾರರನ್ನು ಪ್ರತಿನಿಧಿಸುವ ಪರ್ಯಾಯ ಪದ ಪ್ರಯೋಗವಾಗಿದೆ. ಇಲ್ಲಿ ದಲಿತರ ಮೇಲೆ ನಡೆಯುತ್ತಿರುವ ದೈಹಿಕ ದೌರ್ಜನ್ಯ ಮತ್ತು ಮಾನಸಿಕ ಹಿಡಿತಗಳು ಅವರನ್ನು ಉಸಿರುಗಟ್ಟುವ ಸಮಾಜದೊಳಗೆ ಬದುಕಲು ಬಿಟ್ಟಂತಾಗಿದೆ.

ಶ್ರೀಮಂತರ ಬಂಗಲೆಗಳಲ್ಲಿ ಸಾವಿರಾರು ವರ್ಷಗಳಿಂದ ದುಡಿಯುತ್ತಾ ಅವರ ಅಭಿವೃದ್ಧಿಯ ಆಧಾರ ಸ್ಥಂಭಗಳಾದವರೇ ದಲಿತರು. ಈ ಕವನ ಯಜಮಾನ ಸಂಸ್ಕೃತಿಯನ್ನು ಮತ್ತು ದಲಿತರ ಮೇಲಿನ ನಿರಂತರ ದಬ್ಬಾಳಿಕೆಯನ್ನು ಸೂಚಿಸುವುದಾಗಿದೆ. ಇಂತಹ ಭೂಮಾಲೀಕ, ಬಂಡವಾಳಗಾರ, ಶ್ರೀಮಂತರ ಬದುಕಿಗೆ ಊರುಗೋಲಾಗಿ ನಿಂತಿರುವವರೇ ಈ ಕೂಲಿಕಾರರು.

*ಅವರ ತೋಟದ ತೆಂಗಿನಲ್ಲಿ*
*ನಮ್ಮ ರಕ್ತದ ಎಳನೀರು*
*ಅವರ ಅಮಲಿನ ಗುಂಗಿನಲ್ಲಿ*
*ಕೂಲಿ ಹೆಣ್ಣಿನ ಕಣ್ಣೀರು* (ಬೆಲ್ಚಿಯ ಹಾಡು)

ಈ ಸಾಲುಗಳನ್ನು ಗಮನಿಸಿದಾಗ ಭೂಮಾಲೀಕರ ತೋಟದಲ್ಲಿ ಸದಾ ಜೀತಗಾರನಾಗಿ ದುಡಿಯುತ್ತಿರುವ ಶ್ರಮಿಕ ವರ್ಗದ ಶ್ರಮದ ಪ್ರತಿಫಲವನ್ನು ಅವರು ರಕ್ತ ಬಸಿದು ಸೃಷ್ಟಿಸಿದ ಎಳನೀರನ್ನು ಕುಡಿದು, ಆ ಕೂಲಿಕಾರರ ಹೆಣ್ಣು ಮಕ್ಕಳನ್ನೇ ಮೋಜಿನ ವಸ್ತುಗಳಾಗಿ ಬಳಸಿಕೊಂಡುಅವರ ಪವಿತ್ರ ಬದುಕಿನಲ್ಲಿ ತಲೆದೂರಿಸಿ ಅವರನ್ನು ಲೈಂಗಿಕವಾಗಿ ಶೋಷಣೆ ಮಾಡುವುದನ್ನು ಸಹ ನಾವು ಗಮನಿಸಬಹುದು. ಅದನ್ನು ಕವಿ ತುಂಬಾ ನೇರವಾದ ಭಾಷೆಯ ಮೂಲಕ ತೋರಿಸಿಕೊಟ್ಟಿದ್ದಾರೆ.

ಕವಿಯು 'ಕೆಂಪುಸೂರ್ಯ' ಕವಿತೆಯಲ್ಲಿ ದಲಿತರು ಬೆಂದು ಬಸವಳಿದು ಬದುಕುತ್ತಿರುವ| ಸ್ಥಿತಿಯನ್ನು 'ಸೊರಗಿ ಉಚ್ಚೆಳ್ಳು ಕಡ್ಡಿಯಾಗಿ' ಎಂಬ ಸಾಲಿನಲ್ಲಿ ತಿಳಿಸುತ್ತಾರೆ.

'ಇಪ್ಪತ್ತು ಅಂಶಗಳ ಒಪ್ಪೊತ್ತಿನೂಟದಲಿ
ಸೊರಗಿ ಉಚ್ಚಳು ಕಡ್ಡಿಯಾಗಿ
ಬೆಂದು ಬಳಲಿದ ಜನರು' (ಕೆಂಪುಸೂರ್ಯ)

ಈ ಸಾಲಿನಲ್ಲಿ ಕವಿ ರಾಜಕೀಯ ಕಾರಣದಿಂದ ಕೇವಲ ಓಟಿಗಾಗಿ ದಲಿತರನ್ನು ವಂಚಿಸುವ ೨೦ ಅಂಶಗಳ ಕಾಯಿದೆಯ ತಾತ್ಕಾಲಿಕ ಪರಿಹಾರ ನೀಡುವ ಸರಕಾರದ ಯೋಜನೆಯನ್ನು ವಿಡಂಬನೆ ಮಾಡುತ್ತಾಅಂದಿನ ದಲಿತರು ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದ ಸ್ಥಿತಿಯಿಂದ ಸೊರಗಿರುವ ಉಚ್ಚಳಿನ ಕಡ್ಡಿಯಂತಾಗಿರುವುದನ್ನು ತೋರಿಸಿಕೊಟ್ಟಿದ್ದಾರೆ.

'ಬಿದ್ದಾವು ಮನೆಗಳು' ಕವಿತೆಯು ಇಡೀ ದಲಿತ ಸಮುದಾಯದ ದುಃಖ ದುಮ್ಮಾನಗಳನ್ನು ಅವರ ಬದುಕಿನ ರೀತಿಯನ್ನು ಕಣ್ಣಿಗೆ ಕಟ್ಟುವಂತೆ ಕಾಣಿಸುತ್ತದೆ. ಇಲ್ಲಿ ದಲಿತರು ಎನ್ನುವುದಕ್ಕಿಂತ ಬಡವರು ಎನ್ನುವ ಮಾತು ಅತಿ ಮುಖ್ಯವಾಗುತ್ತದೆ. ಏಕೆಂದರೆ ಈ ಕೃತಿ ಹೊಲೆಮಾದಿಗರ ಹಾಡಿಗಿಂತ ಒಂದು ಹೆಜ್ಜೆ ಮುಂದೆ ಬಂದು ಇಡೀ ನಾಡಿನ ಬಡವರ ರೈತರ ಬಗ್ಗೆಯೂ ಚಿಂತಿಸುವುದು.

ಬಿದ್ದಾವು ಮನೆಗಳು ಬಿದ್ದಾವು ಹೆಣಗಳು
ಬಿದ್ದಾವು ತೆಂಗಿನ ಗರಿಗಳು । ಅಣ್ಣಯ್ಯಾ
ಬಡವರ ಸಾವು ಆಯ್ತಲ್ಲೋ (ಕೆಂಪುಸೂರ್ಯ)

ಇಲ್ಲಿ ಕವಿಯು ಬಡವರ ಬಗೆಗೆ ಅನುಕಂಪವನ್ನು ತೋರುತ್ತಾ ಬಡವರು ವಾಸಮಾಡುತ್ತಿದ್ದ ಗುಡಿಸಲು ಜಾಗದಲ್ಲಿ ಬಂಡವಾಳಶಾಹಿಗಳು ಬಹು ಮಹಡಿ ಕಟ್ಟಡವನ್ನು ನಿರ್ಮಿಸಿ ಬಡವರನ್ನು ಬೀದಿಗೆ ತಳ್ಳಿ ಮುಗುಳು ನಗುವ ಚಿತ್ರಣವಿದೆ.

ಕತ್ತೆ ಮತ್ತು ಧರ್ಮ' ಕವಿತೆಯಲ್ಲಿಯೂ ಕವಿಯು ಸಾಮಾಜಿಕ ಪರಿಸ್ಥಿತಿಯ ಚಿತ್ರಣವನ್ನು ಹಿಡಿದಿಟ್ಟಿರುವುದನ್ನು ಗಮನಿಸಬಹುದು. ಅಂದಗಿನ ಪರಿಸ್ಥಿತಿಯಲ್ಲಿನ ಜಾತ್ರಾ ವಿಶೇಷಗಳು ಭಿಕ್ಷುಕರು, ವೇಶ್ಯೆಯರು, ಶ್ರೇಷ್ಟವಾದ ಪೂಜೆಗೆ ಬ್ರಾಹ್ಮಣರು ದಾನ ಮಾಡಲು ಸಾಹುಕಾರರು ಹೀಗೆ ಎಲ್ಲರನ್ನು ಹೆಸರಿಸುತ್ತಾರೆ.

''ಕೈಚಾಚಿ ಭಿಕ್ಷ್ನದೋರು ಮೈಚಾಚಿ ಸೂಳೇರು
ಭಕ್ತೀಲಿ ಕುಡಿದು ಕುಣಿಯೋರು।''

ಹೀಗೆ ಹೇಳುವಾಗ ಕವಿ ಅಲ್ಲಿನ ಜಾತಿಗಳು ಮತ್ತು ಅವರ ಮುಖ್ಯ ಕಸುಬುಗಳು ಯಾವುವು ಎಂಬುದನ್ನು ಪರಿಚಯಿಸಿದ್ದಾರೆ. ಇದೇ ರೀತಿಯಲ್ಲಿ ಬಡವರ ಸಂಕಟವನ್ನು ನಮಗೆ ಕಟ್ಟಿಕೊಡುವ ಸಿದ್ಧಲಿಂಗಯ್ಯನವರು 'ಕರಾಳರಾಣಿಯ ಕಥೆ' ಕವಿತೆಯಲ್ಲಿ ಬಡವರ ನೋವು ಸಂಕಟವನ್ನು ಕಟ್ಟಿಕೊಡುತ್ತಾರೆ.

ತುರ್ತು ಪರಿಸ್ಥಿತಿ ಕರಾಳರಾಣಿಯ
ಕತೆಯನು ಹೇಳ್ತೀವಿ
ಬಡವರ ಸಾವಿರ ಸಂಕಟವನ್ನು
ಜೊತೆಯಲಿ ಹೇಳ್ತೀವಿ

ಈ ಕವಿತೆಯು ಅಂದಿನ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಬಡವರ ಮತ್ತು ದಲಿತರ ಬದುಕಿನೊಡನೆ ಚೆಲ್ಲಾಟವಾಡುತ್ತಾ ಇಡೀ ದೇಶವನ್ನೇ ಜೈಲನ್ನಾಗಿ ಮಾಡಿ ಜನಗಳ ಬಾಯಿಗೆ ಬೀಗವನ್ನಾಕಿ ಇಡೀ ಜನರ ವಾಕ್‌ಸ್ವಾತಂತ್ರ್ಯವನ್ನುಕಿತ್ತುಕೊಂಡು ಭಾರತೀಯರನ್ನು ಅಸಹಾಯಕರನ್ನಾಗಿ ಮಾಡಿದ ಪರಿಸ್ಥಿತಿಯನ್ನು ಕವಿ ಕಟ್ಟಿಕೊಟ್ಟಿದ್ದಾರೆ.

'ಕಂಡೆ ನನ್ನವಳ ಒಂದು ದಿನ' ಕವಿತೆಯು ದಲಿತ ಹೆಣ್ಣುಮಗಳು ಪಟ್ಟಭದ್ರ ಹಿತಾಸಕ್ತಿಗಳಿಗೆ ಬಲಿಯಾಗಿ, ಕಾಮುಕರ ಚೆಲ್ಲಾಟದಲ್ಲಿ ಚೆಂಡಿನಂತಾಗಿ ತನ್ನ ಬದುಕನ್ನೇ ಕತ್ತಲೆಯಾಗಿ ಮಾಡಿದ ಸ್ಥಿತಿಯನ್ನು ತೋರುತ್ತದೆ. ಸುಮಾರು ೪೨ ಸಾಲುಗಳಲ್ಲಿ ರಚಿತವಾದ ಈ ಕವಿತೆಯಲ್ಲಿ ಕಾವ್ಯದ ನಾಯಕಿಯ ಮೇಲೆ ಜರುಗಿದ ಅತ್ಯಾಚಾರದ

ಕ್ರೌರ್ಯ ಚಿತ್ರಣವನ್ನು ಕವಿ ತನ್ನ ಭಾಷೆಯ ಮೂಲಕ ಹಿಡಿದಿಟ್ಟಿದ್ದಾರೆ. ಇಂತಹ ಅತ್ಯಾಚಾರಗಳು ದಲಿತ ಮಹಿಳೆಯರ ಮೇಲೂ ನಡೆದಿವೆ ಎಂಬುದನ್ನು ತಿಳಿಸುವುದು ಕವಿಯ ಮುಖ್ಯ ಉದ್ದೇಶವಾಗಿದೆ.

ದಣಿಗಳ ಹಬ್ಬದ ಊಟಕ್ಕಾಗಿ
ಖಂಡವ ಕಿತ್ತುಕೊಟ್ಟವರು
ನೆಲದಾಧಾರ ತಪ್ಪಿದ ಜನರು
ಮುಗಿಲಿನ ಆಸರೆ ಸಿಗದವರು (ಚೋಮನ ಮಕ್ಕಳ ಹಾಡು)

ಈ ಕವಿತೆಯು ಅಂದಿನ ದಲಿತರು ಊಟಕ್ಕಾಗಿಯೇ ಜಮೀನುದಾರರ ಮನೆಯಲ್ಲಿ ಬೆಳಿಗ್ಗೆಯಿಂದ ಸಂಜೆಯವರೆವಿಗೂ ದುಡಿಯಬೇಕಾಗಿತ್ತು ಎನ್ನುವ ಮಾತು ಮತ್ತು ನೆಲದ ಅಂದರೆ ಭೂಮಿಯ ಹಕ್ಕು ಅವರಿಗಿಲ್ಲ ದಲಿತರು ಭೂಮಿ ಹೊಂದಬಾರದು ಎನ್ನುವ ಸ್ಥಿತಿಯಲ್ಲಿ ಬದುಕಿದ್ದವರು ಎಂಬುದನ್ನು ತಿಳಿಸುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ 'ಸಾವಿರಾರು ನದಿಗಳು' ಕವನ ಸಂಕಲನದಲ್ಲಿರುವ ಕವಿತೆಗಳು ದಲಿತರ ಕುರಿತು ಬರೆದವುಗಳು ಎನ್ನುವುದಕ್ಕಿಂತ ಹೆಚ್ಚಾಗಿ ಬಡವರ ಶ್ರಮಿಕವರ್ಗದವರ ನೊಂದವರ, ದುಃಖ ದುಮ್ಮಾನಗಳನ್ನು ಒಳಗೊಂಡವರ ಬದುಕಿನ ಸ್ಥಿತಿಗತಿಗಳನ್ನೊಳಗೊಂಡಂತಹ ಕವಿತೆಗಳು ಎಂದು ಕರೆಯಬಹುದಾಗಿದೆ.

ಡಾ. ಸಿದ್ಧಲಿಂಗಯ್ಯನವರು ದಲಿತ, ದಮನಿತ ದನಿಗಳ ನೋವನ್ನು ಕಾವ್ಯದ ರೀತಿಯಲ್ಲಿ ಮಂಡಿಸುತ್ತಾ ಅವರ ಬದುಕನ್ನು ಅನಾವರಣಗೊಳಿಸಿದರು. ಅವರ ಕಾವ್ಯ ಶೈಲಿಯಲ್ಲಿಯೇ ಸ್ವಲ್ಪ ಬದಲಾವಣೆಯನ್ನು ತಂದುಕೊಳ್ಳುತ್ತ ಒಂದು ಖಂಡಕಾವ್ಯ ರಚಿಸಿ ಇಡೀ ದೇಶದ ದಲಿತರ ಅದರಲ್ಲಿಯೂ ಹೆಚ್ಚಾಗಿ ಹೊಲೆಮಾದಿಗರ ದಾರುಣ ಸ್ಥಿತಿಯನ್ನು ಮಾರ್ಮಿಕವಾಗಿ ಮಂಡಿಸುವ ರೀತಿಯನ್ನು ಮನಗಾಣಬಹುದು. ಈ ಕಾವ್ಯದಲ್ಲಿ ಯಾವ ನಾಯಕ ನಾಯಕಿಯರಿಲ್ಲದಿದ್ದರೂ ಹೊಲೆ ಮಾದಿಗರ ಆಸೆ ನಿರಾಸೆಗಳ ಚಿತ್ರಣವನ್ನು ಕಟ್ಟಿಕೊಡುವ ಕವಿಯ 'ಅಲ್ಲೇ ಕುಂತವರೆ' ಕಾವ್ಯವು ದಮನಿತ ದನಿಗಳ ಕೂಗಾಗಿದೆ. ಮತ್ತು ಈ ಕಾವ್ಯವು ಸಮಕಾಲೀನ ರಾಜಕೀಯ ವ್ಯವಸ್ಥೆಯನ್ನು ಕುರಿತ ಪದ್ಯವಾಗಿದೆ.

ಯಜಮಾನ್ರ ಮನೆ ಸೇರ್ಕಂಡೊ
ರಾತ್ರಿ ಹಗ್ಲು ಅನ್ನಂಗಿಲ್ಲ
ಜೀವಕ್ಕೆ ಗ್ಯಾರಂಟಿ ಇಲ್ಲ (ಅಲ್ಲೆಕುಂತವರೆ)

ಈ ಸಾಲುಗಳನ್ನು ಗಮನಿಸಿದರೆ ಉಳ್ಳವರ ಮನೆ ಬಾಗಿಲಲ್ಲಿ ನಾಯಿಯಂತೆ ಬದುಕುತ್ತಿರುವ ದಲಿತರ ದಾರುಣ ಬದುಕನ್ನು ಅವರು ತಮ್ಮ ಜೀವದ ಹಂಗನ್ನೇ ತೊರೆದು ಬದುಕುವ ಸ್ಥಿತಿಯನ್ನು ಉಳ್ಳವರ ಹತ್ತಿರ ಜೀತದಾಳುಗಳಾಗಿ ತಮ್ಮ ಮುಂದಿನ ಬದುಕಿನ ಭರವಸೆಯನ್ನು ಮರೆತು ಇರುವ ದಲಿತರ ಸ್ಥಿತಿಯನ್ನು ಕವಿ ತಿಳಿಸುತ್ತಿದ್ದಾರೆ.

ಮಾತುಕೇಳಿದ ಜನರು ನೇತು ಹಾಕಲು ಮರಕೆ
ಹಾವಿನ ಹಗ್ಗ ತಂದವರು
ಮಂತ್ರಿಮಾನ್ಯರ ಜೊತೆಗೆ ತಂತ್ರವ ಮಾಡೋರು
ಚೂರಿಯ ಗೆಳೆಯರು ಅಲ್ಲವೇನೋ (ಅಲ್ಲೇ ಕುಂತವರೆ)

ಕವಿಯ ಈ ಬರಹ ಅಂದು ನಡೆಯುವ ರಾಜಕೀಯ ಪರಿಸ್ಥಿತಿಯಿಂದ ದಲಿತರ ಮೇಲೆ ನಡೆಯುವ ನಿರಂತರ ದೌರ್ಜನ್ಯಗಳು ಕೇವಲ ರಾಜಕಾರಣಿಗಳ ಕೈಗೊಂಬೆಗಳಾಗಿ ಬದುಕುತ್ತಿರುವ ದಲಿತರು ರಾಜಕಾರಣಿಗಳ ಮಾತನ್ನು ಕೇಳದಿದ್ದಾಗ ಅವರ ಬದುಕನ್ನೇ ಸರ್ವನಾಶ ಮಾಡುವ ನಾಗರ ಹಾವಿನಷ್ಟು ವಿಷ ತುಂಬಿರುವ ರಾಜಕೀಯ ಪುಡಾರಿಗಳ ಚಾಕುಚೂರಿಯ ದರ್ಬಾರಿನ ದೌರ್ಜನ್ಯವನ್ನು ಕವಿಯು ಕಾವ್ಯದಲ್ಲಿ ಕಟ್ಟಿಕೊಡುತ್ತಾ, ಅಂದಿನ ದಲಿತರ ಬದುಕಿನ ಸ್ಥಿತಿಯು ತುಂಬಾ ನಿಕೃಷ್ಟ ಸ್ಥಿತಿಯೆನಿಸಿದ್ದು ಉಸಿರುಗಟ್ಟಿಸುವ ಸಮಾಜದ ನಡುವೆಯೇ ಬದುಕುತ್ತಿರುವ ಸ್ಥಿತಿಯನ್ನು ತೋರಿಸಿದ್ದಾರೆ.

**ಕಪ್ಪುಕಾಡಿನ ಹಾಡು**

ಈ ಕವನ ಸಂಕಲನದ ಶೀರ್ಷಿಕೆಯೇ ದಲಿತರ ಬದುಕಿನ ಕರಾಳ ಸ್ಥಿತಿಯನ್ನು ತೋರಿಸುವುದಾಗಿದೆ. ಸುಮಾರು ೨೨ ಕವನಗಳಿರುವ ಈ ಸಂಕಲನವು ಕವಿಯ ಹೊಲೆಮಾದಿಗರ ಹಾಡು ಮತ್ತು ಸಾವಿರಾರು ನದಿಗಳು ಕೃತಿಯಲ್ಲಿ ವ್ಯಕ್ತವಾಗಿರುವ ಸಿಟ್ಟು ಆಕ್ರೋಶ ದಲಿತರ ಸಂವೇದನೆಗಳೆಲ್ಲವೂ ಈ ಸಂಕಲನದಲ್ಲಿ ಕಾಣಿಸಿಕೊಂಡಿರುವಂತೆ 'ಕಪ್ಪುಕಾಡಿನ ಹಾಡು' ಸಂಕಲನದಲ್ಲಿ ಕಾಣುವುದಿಲ್ಲವಾಗಿದೆ. ಇಲ್ಲಿ ಕವಿಯ ಮನೋಭಾವವು ವಿಷಾದದ ಮೆಲುಮಾತಿನ ವ್ಯಂಗ್ಯದ ದ್ವನಿಗಳು ಇಲ್ಲಿ ಕಾಣುತ್ತವೆ. ಕವಿಯ

ಧ್ವನಿಯು ಇಲ್ಲಿ ಮೆಲುಧ್ವನಿಯಾಗಿ ಅವರ ರೋಷವೇಶಗಳಲ್ಲಿ ಮೃದುವಾಗಿರುವುದನ್ನು ಗಮನಿಸಬಹುದು.[೧೦]

'ನನ್ನ ಕವನ' ಕವಿತೆಯಲ್ಲಿ ಕವಿಯು ಸಿಟ್ಟು ಆಕ್ರೋಶವನ್ನು ವ್ಯಕ್ತಪಡಿಸದೆಯೇ ಕೇವಲ ಅವರ ಬದುಕಿನ ಅಸಹಾಯಕ ಸ್ಥಿತಿಯನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ.

ಗುಡಿಸಿಲಿನಲ್ಲಿ ಅರಳುವ ಗುಲಾಬಿ
ನಕ್ಷತ್ರ ನನ್ನ ಕವನ............
ಕಾಡಿನ ನಡುವೆ ಕಂಗೆಟ್ಟವರಿಗೆ
ಕಂಡದಾರಿ ಕವನ
ನಡುರಾತ್ರಿಯಲಿ ನಡುಗುವ ಜನತೆಗೆ
ಧೈರ್ಯ ಕೊಡುವ ಕವನ

ಈ ಸಾಲುಗಳಲ್ಲಿ ಕವಿಯು ದಲಿತರು ವಾಸಿಸುತ್ತಿರುವ ಮನೆಯ ಚಿತ್ರಣವನ್ನು ರಾತ್ರಿಲ್ಲಿ ಆಕಾಶದಲ್ಲಿನ ನಕ್ಷತ್ರಗಳು ಕಾಣುವ ಸ್ಥಿತಿಯನ್ನು ಕಟ್ಟಿಕೊಟ್ಟಿದ್ದಾರೆ. ಇಲ್ಲಿ ದಲಿತರ ಸ್ಥಿತಿಯು ಅವರು ಮಲಗುವಾಗ ಆಕಾಶವೇ ಹೊದಿಕೆ ಭೂಮಿಯೇ ಹಾಸಿಗೆ ಎಂಬಂತೆ ಕಾಣುತ್ತಿದೆ. ಕೊರೆವಚಳಿಯಲ್ಲಿಯೂ ಹೊದಿಕೆಗಳಿಲ್ಲದೆ ನಡುಗುತ್ತಿರುವ ದಲಿತರ ಸ್ಥಿತಿಯನ್ನು ಕಾಣಬಹುದು. ಇಲ್ಲಿ ಕವಿಯು ತಲತಲಾಂತರಗಳಿಂದ ಹಸಿವು ಅವಮಾನಗಳ ಅಗ್ನಿ ಕುಂಡದಲ್ಲಿ ನೊಂದು ಬೆಂದವರ ನಡುವಿನಿಂದ ಬಂದುದರಿಂದ ಆ ಸಮುದಾಯದ ಅನುಭವಗಳನ್ನು ಈ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ.

ಕವಿಯು 'ಬೆಂಗಳೂರಿನ ಹಾಡು' ಕವಿತೆಯಲ್ಲಿ ತಾವು ಬೆಂಗಳೂರಿನಲ್ಲಿ ವಾಸ್ತವ್ಯವನ್ನು ಹೂಡಿದಾಗ ಅಲ್ಲಿನ ಪರಿಸ್ಥಿತಿಯ ಗೋಳಿನ ಕತೆಯನ್ನು ಇಲ್ಲಿ ನಮೂದಿಸುತ್ತಾರೆ.

ನನ್ನ ಗಂಡನ ಜೊತೆಯ ಜೀತಗಾರರ ಕತೆಯು
ಯಾವ ಹಾಡಿನ ಒಳಗೂ ಮೂಡಲಿಲ್ಲ
ರಾಜ್ಯದಾಹದ ಬೆಂಕಿ ಊರೂರ ಸುಟ್ಟಾಗ
ಬೂದಿಯಾದರೊ ಅವರು ತಿಳಿಯಲಿಲ್ಲ

ಕವಿಯ ಮಾತುಗಳು ತುಂಬಾ ವೇದನೆಯಿಂದ ಕೂಡಿದೆ ಎನ್ನಬಹುದು. ಅಂದಿನ ದಲಿತರ ಸ್ಥಿತಿಯು ಅಷ್ಟೇ ವೇದನೆಯಿಂದ ಕೂಡಿತ್ತು ಎನ್ನುತ್ತಾರೆ. ಜೀತಗಾರಿಕೆಯ ಪರಿಸ್ಥಿತಿಯು ಅಂದಿನ ಬುದ್ಧಿವಂತ ಬರಹಗಾರರ ಕಾವ್ಯದ ವಸ್ತುವಾಗಲೇ ಇಲ್ಲವೆಂಬ ವಿಷಾದವನ್ನು ವ್ಯಕ್ತಪಡಿಸಿದ್ದಾರೆ. ಅಧಿಕಾರದ ಆಸೆಯಿಂದ ಇಡೀ ದಲಿತರ ಕೇರಿಗೆ ಬೆಂಕಿ ಹಚ್ಚಿದರೂ ಸುಟ್ಟು ಬೂದಿಯಾದವರ ಬದುಕಿನ ಚಿತ್ರಣವನ್ನು ಯಾವ ರಾಜಕಾರಣಿಯೂ ಬಂದು ಗಮನಿಸಲೇ ಇಲ್ಲ ಎನ್ನುವ ಕವಿಯ ವಿಷಾದದ ಮಾತು ಅಂದಿನ ದಲಿತರು ರಾಜಕಾರಣಿಗಳಿಗೆ ಕೇವಲ ಓಟಗಾಗಿ ಬೇಕಾದ ಜನಾಂಗವಾಗಿಯೇ ಉಳಿದಿತ್ತು ಎಂಬುದನ್ನು ತಿಳಿಸುತ್ತಾರೆ.

ಕವಿಯು ತಮ್ಮ ಬರವಣಿಗೆಯ ಕಾಲದಲ್ಲಿ ಸಂಭವಿಸಿದ ತುರ್ತು ಪರಿಸ್ಥಿತಿಯನ್ನು ಆಧಾರವಾಗಿಟ್ಟುಕೊಂಡು ಅದನ್ನು ಪ್ರಶ್ನಿಸುವ ಮತ್ತು ಅಂದಿನ ಜನರ ಸ್ಥಿತಿಗತಿಗಳನ್ನು ತಿಳಿಸುವಂತಹ ಕೆಲಸ ಮಾಡುತ್ತಾರೆ.

ಆಳನು ಕರೆದಳು ಪಟ್ಟದ ರಾಣಿ
ಆಳು ಬಾರೋ ನನ್ನ
ಜೀತಗಾರನ ಜೊತೆಗೆ ಕರೆದಳು
ಪ್ರೀತಿ ಮಾಡೋ ನನ್ನ (ರಾಣಿಯ ಪ್ರೇಮ)

ಈ ಮಾತುಗಳು ಅಂದು ೭೦ರ ದಶಕದಲ್ಲಿ ಸಿದ್ಧಲಿಂಗಯ್ಯನವರ ಬರವಣಿಗೆಯ ಸಂದರ್ಭದಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಘೋಷಿಸಿದ ತುರ್ತುಪರಿಸ್ಥಿತಿಯನ್ನು ಆಧಾರವಾಗಿಟ್ಟುಕೊಂಡು ಆ ಸಂದರ್ಭದಲ್ಲಿಯೂ ಜೀತಗಾರಿಕೆ ಎಂಬುದು ತುಂಬಾ ಘೋರವಾಗಿತ್ತು ಎಂಬುದನ್ನು ಸೂಚಿಸುತ್ತದೆ ಜೊತೆಗೆ ಕವಿ ರಾಣಿ ಮತ್ತು ಜೀತಗಾರಿಕೆಯವರ ನಡುವೆ ಬಾಂಧವ್ಯವನ್ನು ಬೆಸೆಯುವಂತಹ ಪ್ರಯತ್ನವನ್ನು ಸಹ ತೋರಿಸುತ್ತಾ ಮುಂದೊಂದು ದಿನ ದಲಿತರು ದೇಶ ಆಳಬಲ್ಲರು ಎಂಬುದನ್ನು ಹೇಳುತ್ತಾರೆ. ಆದರೆ ಜೀತಗಾರರನ್ನು ಪದ್ಯದ ಕೊನೆ ಭಾಗದಲ್ಲಿ ಸಾಯಿಸುವುದನ್ನು ಗಮನಿಸಿದರೆ ಆಳುವ ವರ್ಗಗಳ ಸರಿ ಸಮಾನವಾಗಿ ಜೀತಗಾರರು ಬರಲು ಪ್ರಯತ್ನಿಸಿದರೆ ಅವರ ಅವನತಿ ಖಂಡಿತ ಎಂಬುದನ್ನು ಮತ್ತು ಅಂದಿನ ಪರಿಸ್ಥಿತಿಯಲ್ಲಿ ಜೀತಗದಾರರು ದೇಶ ಆಳಲು ಅನರ್ಹರು ಎಂಬುದನ್ನು ಸೂಚಿಸುತ್ತದೆ.

ಹಾಗೆಯೇ ಕವಿಯು 'ದೋಣಿಯ ಹಾಡು' ಕವಿತೆಯನ್ನು ಬರೆಯುವಾಗ ಶೋಷಣೆಗೊಳಗಾದವರ ಚೂರು ಪಾರು ಕನಸುಗಳೆಲ್ಲ ಮುರಿದು ಬಿದ್ದು ಅದು ಶೋಷಿತರ ಸಾಗರದೊಳಗೆ ಸೇರಿ ಕಣ್ಮರೆಯಾಗಿ ಇಡಿ ದಲಿತರ ಬದುಕು ಅಸಹಾಯಕ ಸ್ಥಿತಿಗೆ ತಲುಪುವುದನ್ನು ಮತ್ತು ಆ ಶೋಷಣೆಯಲ್ಲಿ ಸಿಲುಕಿ ಹೆಣವಾದವರ ಚಿತ್ರಣವನ್ನು ಕಟ್ಟಿಕೊಡುತ್ತಾರೆ.

ಚೂರು ಚೂರಾಗಿತ್ತು ದೋಸಿ
ಮುರಿದು ಬಿದ್ದವು ಎಲ್ಲಾ ಕನಸು
ಹೇಳಲಾಗದ ಗೋಳಿನಲ್ಲಿ
ಬಾಳು ಬಿದ್ದಿತ್ತು (ದೋಣಿಯ ಹಾಡು)

ಕವಿಯು ಜಾತಿ ವ್ಯವಸ್ಥೆಯ ಸೂಕ್ಷ್ಮತೆಯನ್ನು ವಿವರಿಸುತ್ತಾ ಅಂತರಜಾತಿ ವಿವಾಹವನ್ನು ಸಹಿಸಲಾರದ ವ್ಯವಸ್ಥೆಯನ್ನು ಬೆರಳು ಮಾಡಿ ತೋರುತ್ತಾ ಇಡೀ ಜಾತಿ ವ್ಯವಸ್ಥೆಯ ಸಾಗರದೊಳಗೆ ಬದುಕಿನ ಪ್ರೀತಿಯ ಸಂಕೇತವನ್ನು ಧ್ವನಿಸುತ್ತಾ ಅಂತರಾಳದ ತುಡಿತವನ್ನು ಬಡಿದೆಬ್ಬಿಸುವಲ್ಲಿ ರೋಷದ ಕಾವು ಅಸಾಧ್ಯ ಶಕ್ತಿ, ಕ್ಷಣದಲ್ಲಿ ಸಿಗುವ ಆಸೆಯ ಲೋಕ ಜೊತೆಗೆ ಜಾತಿಯ ನೋವನನೇ ಅನುಭವಿಸುತ್ತಿರುವ ವಿವರವನ್ನು 'ನಿನ್ನ ಕಣ್ಣಿನ ಮಾತು' ಕವತೆಯಲ್ಲಿ ನೀಡುತ್ತಾರೆ.

'ಕೋರಕೆ' ಪದ್ಯದಲ್ಲಿ ಕವಿಯು ದಲಿತರ ಅಸಹಾಯಕ ಸ್ಥಿತಿಯನ್ನು ಬೇರೆಯವರು ನಡೆಸುತ್ತಿರುವ ದಾಳಿಯನ್ನು ವಿವರಿಸುತ್ತಾರೆ.

ಜಲವಿಲ್ಲದ ಈ ಭೂಮಿಯ ಮೇಲೆ
ಸಾವು ಹಸಿವುಗಳೇ ಅಲೆಯದಿರಿ
ಬಲವಿಲ್ಲದ ಈ ಬಳ್ಳಿಯ ಮೇಲೆ
ಘೋರ ವೃಕ್ಷಗಳೇ ಎರಗದಿರಿ (ಕೋರಿಕೆ)

ಇಡೀ ದಲಿತರ, ನೊಂದವರ, ಬಡತನದ, ಹಸಿವಿನ ಬವಣೆಯನ್ನು ಚಿತ್ರಿಸುತ್ತಾ ಕವಿಯು ಇಡೀ ಭೂಮಂಡಲದ ಮೇಲೆ ಈ ಬಡತನದ ಛಾಯೆ, ಬಲಾಢ್ಯರು ಹೊರಿಸುತ್ತಿರುವ ಭಾರ, ಕಾಯಿದೆಗಳು, ಕಿತ್ತು ತಿನ್ನುತ್ತಿರುವ ಪ್ರಸಂಗವನ್ನು ತನ್ನ ಕಾವ್ಯದ ವಸ್ತುವಾಗಿಸಿಕೊಂಡಿದ್ದಾರೆ.

ಕವಿಯು ಕವನ ಸಂಕಲನದ ಶೀರ್ಷಿಕೆಯಡಿಯಲ್ಲಿ ಬರೆಯುತ್ತಾ ಸಾಮಾಜಿಕವಾಗಿ ದಲಿತರನ್ನು ಊರಿನ ಹೋಟೇಲು, ದೇವಾಲಯ, ಸಾರ್ವಜನಿಕ ಸ್ಥಳಗಳಿಗೆ ಸೇರಿಸಿದ ಸ್ಥಿತಿಯನ್ನು ಚಿತ್ರಿಸಿದ್ದಾರೆ.

ಸಂಚಾರಕಾಯಿತು ಸಂಚಕಾರ
ತೆರೆದರೂ ಮುಚ್ಚಿರುವ ಗುಡಿ ಹೋಟೆಲು
ಇದ್ದರೂ ಸಿಗಲಿಲ್ಲ ಕೊಳದ ನೀರು
ಅಪ್ಪ ಅವ್ವನ ಒಡನಾಟದಲ್ಲಿ
ಧಣಿಯ ಕೊಟ್ಟಿಗೆಯಲ್ಲಿ ಹಬ್ಬದೂಟ
ಹೊಲೆತನದ ಬೆಂಕಿಯಲ್ಲಿ
ಸುಟ್ಟುಹೋದವು ಎದೆಯ ಹೂವು (ಕಪ್ಪುಕಾಡಿನ ಹಾಡು)

ಕವಿಯ ಈ ಬರಹವನ್ನು ಗಮನಿಸಿದಾಗ ತನ್ನ ಬರವಣಿಗೆಯ ಸಂದರ್ಭದಲ್ಲಿ ಕವಿಗೆ ಜಾತಿಯಿಂದಾದಂತಹ ನಿಂದನೆಗಳು ಶೋಷಣೆ ಎಲ್ಲವೂ ತಿಳಿಯುತ್ತವೆ. ಊರಿನ ಸವರ್ಣೀಯರ ಕೇರಿಗೆ ದಲಿತರ ಪ್ರವೇಶವಿಲ್ಲದಿರುವುದು, ಗುಡಿ ಹೋಟೆಲು ತೆರೆದಿದ್ದರೂ ಅವರಿಗೆ ಒಳಗೆ ಪ್ರವೇಶವಿಲ್ಲದಿರುವುದು, ಕೊಳಾಯಿ ನೀರನ್ನು ಮುಟ್ಟಿಸದಿರುವುದು, ಕೊಳದ ನೀರಿಗೆ ಇಳಿಯಲು ಅವಕಾಶ ನೀಡದಿರುವುದು, ಜಮೀನ್ದಾರರ ಮನೆಗೆ ಅಪ್ಪ ಅವ್ವನ ಜೊತೆಯಲ್ಲಿ ನಡೆದಾಗ ದನಗಳು ವಾಸಿಸುವ ಕೊಟ್ಟಿಗೆಯಲ್ಲಿ ಕೂರಿಸಿ ಊಟ ಹಾಕುವುದು ಇವೆಲ್ಲವನ್ನು ಸಿದ್ಧಲಿಂಗಯ್ಯನವರು ಚಿತ್ರಿಸುತ್ತಾ ಈ ಮೇಲಿನ ಎಲ್ಲಾ ಸವಲತ್ತುಗಳು ಹೊಲೆಯನಾಗಿ ಹುಟ್ಟಿದ ಕಾರಣದಿಂದಲೇ ಅವುಗಳು ನಮಗೆ ಸಿಗದೆ ಹೋದವು ಎಂಬುದನ್ನು ತೋರಿಸಿದ್ದಾರೆ.

ಸಿದ್ಧಲಿಂಗಯ್ಯನವರ ಕವಿತೆಗಳಲ್ಲಿ ಬಡವರ ಪರಿಸ್ಥಿತಿಯನ್ನು ತೋರಿಸುತ್ತಾ ಇಡೀ ದೇಶಕ್ಕೆ ಬಂದಿರುವ ಸ್ವಾತಂತ್ರ್ಯವನ್ನು ಪ್ರಶ್ನಿಸುವ ವೈಖರಿಯನ್ನು ತಿಳಿಯಬಹುದು ಅವರ ನಲವತ್ತೇಳರ ಸ್ವಾತಂತ್ರ್ಯ ಕವಿತೆ ಇಡಿ ಪರಿಸ್ಥಿತಿಯನ್ನು ಕಟ್ಟಿಕೊಡುತ್ತದೆ.

ಬಡವರ ಮನೆಗೆ ಬರಲಿಲ್ಲ
ಬೆಳಕಿನ ಕಿರಣ ತರಲಿಲ್ಲ
ಗೋಳಿನ ಕಡಲನು ಬತ್ತಿಸಲಿಲ್ಲ
ಸಮತೆಯ ಹೂವನು ಅರಳಿಸಲಿಲ್ಲ.

ಈ ಸಾಲುಗಳು ಬಡವರು ಇಂದಿಗೂ ಸ್ವಾತಂತ್ರ್ಯ ಬಂದು ಹಲವು ದಶಕಗಳು ಕಳೆದರೂ ಅವರು ಬಡವರಾಗಿಯೇ ಉಳಿದಿದ್ದಾರೆ. ಅವರ ಗೋಳನ್ನು ಯಾರೂ ಕೇಳುವವರಿಲ್ಲ. ಬರುವ ಎಲ್ಲಾ ವರ್ಷವು ಉಳ್ಳವರ ಪರವಾಗಿಯೇ ಚಿಂತಿಸುವಂತಾಗಿದೆ. ಇಡೀ ದೇಶದಲ್ಲಿ ತುಂಬಿರುವ ಅಸಮಾನತೆಯನ್ನು ಯಾರೂ ದೂರ ಮಾಡಿ ಸಮಾನತೆಯ ಯುಗವನ್ನು ನಿರ್ಮಾಣ ಮಾಡುತ್ತಿಲ್ಲ. ವ್ಯವಸ್ಥೆ ಇನ್ನೂ ಅಸಮಾನತೆಯಿಂದಲೇ ಇದೆ ಎಂದು ಹೇಳಿದ್ದಾರೆ.

ಸಾವಿರಾರು ಜನ ಗೋರಿಯಾದರು
ಲಕ್ಷ ಲಕ್ಷ ಜನ ಗಲ್ಲಿಗೇರಿದರು
ರೈತ ಕಾರ್ಮಿಕರು ರಕ್ತವ ಕೊಟ್ಟರು (ನಲವತ್ತೇಳರ ಸ್ವಾತಂತ್ರ್ಯ)

ಈ ಸಾಲುಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಸಾವಿರಾರು ಜನ ಭಾಗವಹಿಸಿ ತಮ್ಮ ಜೀವನವನ್ನು ಮುಡುಪಿಟ್ಟು ಹೋರಾಡಿ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು. ಭಾರತದಲ್ಲಿ ಇಂದಿಗೂ ಸಮಸ್ಯೆಗಳು ತಾಂಡವವಾಡುತ್ತಲೇ ಇರುವುದರಿಂದ ಸ್ವಾತಂತ್ರ್ಯ ಯಾರಿಗೆ ಬಂದಿದೆ ಎನ್ನುತ್ತಾರೆ. ಇಲ್ಲಿ ಬಡವರು ಬಡವರಾಗಿಯೇ ಉಳಿಯುತ್ತಿದ್ದಾರೆ. ಶ್ರೀಮಂತರು ದರ್ಪ ದಬ್ಬಾಳಿಕೆಗಳಿಂದ ಬಡವರ ಮೇಲೆ ಅಧಿಕಾರ ಚಲಾಯಿಸುತ್ತಿರುವುದನ್ನು ಕಂಡು ಕವಿ ಪ್ರಶ್ನೆ ಮಾಡುತ್ತಿದ್ದಾರೆ.

ತೇಜಸ್ವಿಯವರ ತಬರನ ಕತೆಯನ್ನು ಆಧರಿಸಿ 'ತಬರನ ಹಾಡು' ಕವಿತೆಯನ್ನು ರಚಿಸುವಾಗ ಅಲ್ಲಿ ಅಧಿಕಾರಿಗಳು ನಡೆಸುವ ಸುಲಿಗೆ ಲಂಚಗುಳಿತನದಲ್ಲಿ ಸಿಕ್ಕಿ ಬಡತನದ ಬೇಗೆಯಲ್ಲಿ ಬೇಯುತ್ತಿರುವ ತಬರ ಶೆಟ್ಟಿಯ ಮನದಾಳದ ನೋವನ್ನು ವ್ಯಕ್ತಪಡಿಸುತ್ತಾರೆ

ಅಧಿಕಾರದ ಮದ ಕುಣಿಯುತ್ತಿತ್ತು
ಕುರ್ಚಿ ಕುರ್ಚಿಯಲ್ಲಿ
ಬಡವರ ರಕ್ತ ಹರಿಯುತ್ತಿತ್ತು
ಬೀದಿ ಬೀದಿಯಲ್ಲಿ (ತಬರನ ಹಾಡು)

ಉಳ್ಳವರ ಕೈಯಡಿಯಲ್ಲಿ ಸೆರೆಯಾಗಿರುವ ಅಧಿಕಾರವು ಬಡವರ ಪಾಲಿಗೆ ನ್ಯಾಯ ದೊರಕಿಸಿಕೊಡದಾಗಿದೆ. ಅದು ಕುರ್ಚಿಯಲ್ಲಿ ಬೆಚ್ಚಗೆ ಕುಳಿತು ಬಡವರ ಬದುಕಿನ ಆಟವನ್ನು ನೋಡುತ್ತಿದೆ. ಬಡವರು ಶ್ರಮಜೀವಿಗಳಾಗಿ ದುಡಿಯುತ್ತಾ ತಮ್ಮ ಎದೆಯ ರಕ್ತವನ್ನು

ಬಸಿದು ಅದನ್ನು ಬೀದಿ ಬೀದಿಯಲ್ಲಿ ಹರಿಯುವಂತೆ ಮಾಡುತ್ತಿರುವ ಅಧಿಕಾರಿ ವರ್ಗವನ್ನು ಕವಿ ಕಾವ್ಯದಲ್ಲಿ ತೋರಿಸಿದ್ದಾರೆ.

ಕವಿಯ 'ಅಜ್ಜಿಯ ಹಾಡು' ಮತ್ತು 'ಹೆಂಡಕ್ಕೆ ಸಾವಿಲ್ಲವೊ' ಎಂಬ ಕವನಗಳು ದಲಿತರ ನೈಜ ಬದುಕಿನ ಚಿತ್ರಣವನ್ನು ಕಟ್ಟಿಕೊಡುತ್ತವೆ. ಇಲ್ಲಿ ಚೋಮನು ಹುಟ್ಟು ಹೊಲೆಯನಾದರೂ ಆತ ಜಮೀನ್ದಾರರ ಹೊಲದಲ್ಲಿ ಜೀತಗಾರನಾಗಿಯೇ ದುಡಿಯುತ್ತಿರಬೇಕು. ಆತನಿಗೆ ಸ್ವಂತ ಭೂಮಿಯನ್ನು ಹೊಂದುವ ಅವಕಾಶವಿಲ್ಲ. ಒಂದು ವೇಳೆ ಸಂಕಪ್ಪಯ್ಯನ ತಾಯಿ ಇಂದೋ ನಾಳೆಯೋ ಸಾಯುವವಳ ಮಾತು ಮುಖ್ಯವೇ ಹೊರತು, ಮುಂದೆ ಬದುಕಿನ ಭರವಸೆಯನ್ನೊತ್ತು ನಿಂತಿರುವ ಚೋಮನ ಮಕ್ಕಳ ಭವಿಷ್ಯ ಉಜ್ವಲವಾಗುವುದು ಕಿಂಚಿತ್ತು ಇಷ್ಟವಿಲ್ಲ ಎನ್ನುವುದನ್ನು ಕವಿ ತೋರಿಸುತ್ತಾರೆ.

'ಹೆಂಡಕ್ಕೆ ಸಾವಿಲ್ಲವೋ' ಕವಿತೆಯಲ್ಲಿ ವ್ಯಕ್ತವಾಗುವ ನೋವು ಅಸಹನೀಯವಾದದ್ದು ಮತ್ತು ಕವಿತೆಯ ಶೀರ್ಷಿಕೆಯೇ ಹೇಳುವಂತೆ ದಲಿತ ಜನಾಂಗಕ್ಕೆ ಸಿಟ್ಟು ಅಸಹಾಯಕತೆ ಯಾವುದೇ ಸನ್ನಿವೇಶ ತಲೆದೋರಿದರೂ ಅದಕ್ಕೆ ಪರ್ಯಾಯವೇ ಹೆಂಡವನ್ನು ಸೇವಿಸುವುದು ಇದು ದಲಿತರ ಬದುಕಿನ ಕುಲಕಸುಬು ಎಂಬಂತೆ ಕವಿ 'ಚೋಮನ ಮಕ್ಕಳ ಹಾಡು', 'ಅಜ್ಜಿಯ ಹಾಡು', 'ಹೆಂಡಕ್ಕೆ ಸಾವಿಲ್ಲವೋ' ಎಂಬ ಕವಿತೆಗಳಲ್ಲಿ ತಿಳಿಸಿದ್ದಾರೆ.

ಒಟ್ಟಾರೆಯಾಗಿ ಡಾ. ಸಿದ್ಧಲಿಂಗಯ್ಯನವರು 'ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಕಪ್ಪುಕಾಡಿನ ಹಾಡು, ಕವನ ಸಂಕಲನದಲ್ಲಿ ಶತಶತಮಾನಗಳಿಂದಲೂ ತುಳಿತಕ್ಕೊಳಗಾದವರ ನೊಂದವರ, ಶೋಷಣೆಗೊಳಗಾದವರ, ತುತ್ತು ಕೂಳಿಗಾಗಿಯೇ ದಿನವಿಡಿ ಸೂರ್ಯನಿಗೆ ಮೈಯೊಡ್ಡಿ ದುಡಿದವರ ಬದುಕಿನ ವ್ಯಥೆಯನ್ನು ಚಿತ್ರಿಸಿದ್ದಾರೆ. ದಲಿತರ ಬದುಕಿನ ಸ್ಥಿತಿಯನ್ನು ತನ್ನ ಬರವಣಿಗೆಯಲ್ಲಿ ಹಿಡಿದಿಡುವ ಮೂಲಕ ಶೋಷಿತ ಸಮುದಾಯದ ಕ್ರೂರ ದೃಷ್ಟಿಮತ್ತು ನಡವಳಿಕೆಯನ್ನು ತೋರಿಸಿಕೊಡತ್ತಾರೆ. ಕವಿ ಇದುವರೆವಿಗೂ ಅಸಹಾಯಕರಾಗಿ ಮೂಕವೇದನೆಯನ್ನು ಅನುಭವಿಸುತ್ತಿದ್ದಂತಹ ನೊಂದ ಮನಗಳಿಗೆ ಬಿಡುಗಡೆ ತೋರದಿದ್ದರೂ ಮನಸ್ಸಿಗೆ ನೆಮ್ಮದಿಯನ್ನು ನೀಡುವಂತಹ ಹೋರಾಟದೆಡೆಗೆ ಮನಸು ಮಾಡುವಂತಹ ಮಾತನ್ನು ಹೇಳುವುದರ ಕಡೆಗೆ ತಮ್ಮ ಬರವಣಿಗೆಯನ್ನು ಮುಂದುವರಿಸಿದ್ದಾರೆ.

## ಅಡಿಟಿಪ್ಪಣಿಗಳು

೧. ಹಕ್ಕಿನೋಟ, ಡಾ. ಸಿದ್ಧಲಿಂಗಯ್ಯ, ಕಲ್ಯಾಣಿ ಪ್ರಕಾಶನ, ಪುಟ-೩೬.

೨. ಅದೇ, ಪುಟ.

೩. ಅದೇ, ಪುಟ-೩೮.

೪. 'ಬಡವರ ನಗುವಿನ ಶಕ್ತಿ ಡಾ. ಸಿದ್ಧಲಿಂಗಯ್ಯ', ಡಾ. ಅಪ್ಪಗೆರೆ ಸೋಮಶೇಖರ್, ಚೇತನ್ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್, ಪುಟ-೪

೫. ಅದೇ, ಪುಟ-೮

೬. ಅದೇ, ಪುಟ-೯

೭. ನನ್ನ ಜನಗಳು ಮತ್ತು ಇತರ ಕವಿತೆಗಳು, ಡಾ. ಸಿದ್ಧಲಿಂಗಯ್ಯ, ಮುನ್ನುಡಿ ಡಿ.ಆರ್. ನಾಗರಾಜ್, ಪುಟ-V

೮. ಬಡವರ ನಗುವಿನ ಶಕ್ತಿ, ಸಂ. ದಂಡಪ್ಪ, ಅಂಕಿತ ಪುಸ್ತಕ, ಪುಟ-೧೬೩-೧೬೫.

೯. ಮೆರವಣಿಗೆ, ಡಾ. ಸಿದ್ಧಲಿಂಗಯ್ಯ, ಅಂಕಿತ ಪುಸ್ತಕ, ಪುಟ-೧೭

೧೦. ದಲಿತ ಕಾವ್ಯ ಕುತೂಹಲ, ಎಲ್. ರಾಜಶೇಖರಯ್ಯ, ತ.ವೆಂ.ಗ್ರಂಥಮಾಲೆ, ಪುಟ-೪೯.

೧೧. ಅದೇ, ಪುಟ-೧೫

## ಅಧ್ಯಾಯ -೨

# ಡಾ॥ ಸಿದ್ಧಲಿಂಗಯ್ಯನವರ ಕಾವ್ಯದಲ್ಲಿ ವಸ್ತು ಮತ್ತು ರೂಪಕಗಳು

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹಲವು ಸಾಹಿತ್ಯಪ್ರಕಾರಗಳು ಕಾಣಿಸಿಕೊಂಡರೂ, ಎಲ್ಲದಕ್ಕಿಂತ ಭಿನ್ನವಾಗಿ ಕನ್ನಡ ಕಾವ್ಯ ಪರಂಪರೆ ರೂಪುಗೊಂಡಿದ್ದು ವಿಶೇಷತೆಯಾಗಿದೆ. ಪ್ರಾಚೀನ ಕಾವ್ಯ ಪರಂಪರೆಯಿಂದ ಇಂದಿನ ನವ್ಯ ನವೋದಯ ಪ್ರಗತಿಶೀಲ ಎಲ್ಲಾ ಕಾಲಘಟ್ಟಗಳಲ್ಲೂ ಕಾವ್ಯ ಪರಂಪರೆ ತನ್ನದೇ ಆದ ಛಾಪನ್ನು ಮೂಡಿಸುತ್ತಲೇ ಬಂದಿತ್ತು. ಈ ಘಟ್ಟಗಳಲ್ಲಿ ಹೆಚ್ಚಾಗಿ ಕಾವ್ಯದ ವಸ್ತುಗಳು ಪ್ರಕೃತಿ, ಗಿಡ, ಮರ, ಸೂರ್ಯ ಚಂದಿರ ಹೀಗೆ ಸಿಕ್ಕು ಸಿಕ್ಕ ವಸ್ತುಗಳೆಲ್ಲವೂ ಕಾವ್ಯದ ವಸ್ತುವಾಗತೊಡಗಿದವು. ಇದುವರೆವಿಗೂ ರಚಿತವಾಗಿದ್ದಂತಹ ಕಾವ್ಯಕ್ಕೆ ಇಡೀ ಸಮಾಜದಲ್ಲಿ ನಿಕೃಷ್ಟವಾಗಿ ಜೀವನ ಸವೆಸುತ್ತಿದ್ದಂತಹ ದೀನ ದಲಿತರ ಬದುಕನ್ನು ಯಾರೂ ಕಾವ್ಯದ ವಸ್ತುವನ್ನಾಗಿಸಿಕೊಂಡವರಿಲ್ಲ. ಇದುವರೆವಿಗೂ ರಚಿತವಾದ ಕಾವ್ಯಗಳೆಲ್ಲವೂ ರೂಪಕ, ಉಪಮೆ, ಅಲಂಕಾರಗಳ ರೀತಿಯಲ್ಲಿ ಹೋಲಿಕೆ ಮತ್ತು ವೈಭವೀಕರಣದ ರೀತಿಯಲ್ಲಿ ರಚಿತವಾಗತೊಡಗಿದ್ದವು.

ಸುಮಾರು ೭೦ರ ದಶಕದಲ್ಲಿ ಬೆಂಕಿಯಉಂಡೆಗಳಂತೆ ರಕ್ತವನ್ನು ಕಾರುವಂತಹ ಸಿಡಿಮದ್ದುಗಳಂತೆ ಕನ್ನಡ ಸಾಹಿತ್ಯದಲ್ಲಿ ಕಾವ್ಯ ಹೊರಬರಲು ಸಾಧ್ಯವಾಯಿತು. ಈ ಕಾವ್ಯವು ಯಾವುದೇ ಉಪಮೆ, ರೂಪಕ, ಪ್ರತಿಮೆಗಳಿಲ್ಲದೇ ಯಾರೂ ತಿರಸ್ಕೃತರಾಗಿ ಬದುಕನ್ನು ನಡೆಸುತ್ತಿದ್ದರೋ ಅವರನ್ನೇ ಕಾವ್ಯದ ವಸ್ತುವನ್ನಾಗಿಸಿಕೊಂಡು ಬರೆಯಲು ಮುಂದಾದರು. ಇದುವರೆವಿಗೂ ತುಂಬಾ ತಿರಸ್ಕಾರಕ್ಕೊಳಗಾಗಿ ಬದುಕುತ್ತಿದ್ದವರ ಪರಿಸ್ಥಿತಿ ೭೦ರ ದಶಕದ ಕಾವ್ಯದ ವಸ್ತುವಾಯಿತು. ಯಾವ ದಲಿತ ಜನಾಂಗವು ಕಾವ್ಯಕ್ಕೆ ವಸ್ತುವಾಗಿ ನಿರ್ಮಾಣವಾಗತೊಡಗಿತೋ ಅದೆಲ್ಲವೂ ದಲಿತ ಕಾವ್ಯವಾಗತೊಡಗಿತು. ಯಾರು ದಲಿತರ ಬಗೆಗೆ ಕನಿಕರವೋ!, ಪ್ರೀತಿಯೋ, ಮತ್ತೇನನ್ನೋ ತೋರಿಸುತ್ತಾ ಬರೆಯತೊಡಗಿದರೋ ಅವರೆಲ್ಲರೂ ದಲಿತ ಸಾಹಿತಿಗಳಾದರು ಅಥವಾ ದಲಿತ ಕವಿಗಳೆನಿಸಿ ಕೊಳ್ಳತೊಡಗಿದರು. ಹೀಗೆ ಈ ಕಾಲಘಟ್ಟದಲ್ಲಿ ದಲಿತರ ಬದುಕನ್ನೇ ತನ್ನ ಕಾವ್ಯದ ಅಸ್ತ್ರಗಳಾಗಿ ಬಳಸಿಕೊಂಡು ನೇರವಾದ ಭಾಷೆಯ ಮೂಲಕ ಕಾವ್ಯ ರಚಿಸಿದವರೇ ಡಾ.ಸಿದ್ದಲಿಂಗಯ್ಯ.

ಡಾ. ಸಿದ್ಧಲಿಂಗಯ್ಯ ಎಂದರೆ ದಲಿತರು ದಲಿತರು ಎಂದರೆ ಸಿದ್ಧಲಿಂಗಯ್ಯ ಎನ್ನುವಷ್ಟರ ಮಟ್ಟಿಗೆ ಕನ್ನಡ ನಾಡಿನಲ್ಲಿ ಮನೆಮಾತಾದ ಇವರು ಇಡೀ ದಲಿತರ ಸಮಗ್ರ ಚಿತ್ರಣವನ್ನೇ ಹಿಡಿದಿಡಲು ಪ್ರಯತ್ನಿಸಿದರು.

ಸಾಮಾಜಿಕ ಅಸಮಾನತೆಯ ವ್ಯವಸ್ಥೆಯೊಳಗೆಯೇ ಎದ್ದು ಬಂದಿದ್ದ ಕಾರಣದಿಂದ ದಲಿತರ ಬದುಕಿನ ಚಿತ್ರಣವನ್ನು ಅವರು ಮನಗಂಡಿದ್ದರು. ಆ ಕಾರಣಕ್ಕಾಗಿ ಇವರಿಗೆ ಕಾವ್ಯಕ್ಕೆ ಬೇಕಾಗಿರುವ ವಸ್ತುವಿನ ಹುಡುಕಾಟದ ತೊಂದರೆಯಿರಲಿಲ್ಲ. ತನ್ನ ಬದುಕಿನಲ್ಲಿಯೇ ನಡೆದ ಹಲವಾರು ನಿತ್ಯ ಘಟನೆಗಳನ್ನೇ ವಸ್ತುವಾಗಿಸಿಕೊಂಡರು. ಶೋಷಣೆ, ಅಪಮಾನ, ಅನ್ಯಾಯ, ಮನುಷ್ಯರನ್ನು ಮನುಷ್ಯರಂತೆ ಕಾಣದ ಅಮಾನವೀಯ ಕ್ರೌರ್ಯಗಳು, ಬದುಕನ್ನೇ ಸರ್ವನಾಶ ಮಾಡಲು ಮುನ್ನುಗ್ಗುತ್ತಿರುವ ಜಾತಿ ವ್ಯವಸ್ಥೆ ಇವೆಲ್ಲದರಿಂದ ತನ್ನನ್ನು, ತನ್ನ ಸುತ್ತಲಿನ ಸಮಾಜವನ್ನು ಅರಿತ ಇವರು ಅದನ್ನೇ ಕಾವ್ಯದ ವಸ್ತುವಾಗಿಸಿಕೊಂಡರು.

ಸಿದ್ಧಲಿಂಗಯ್ಯನವರು ಇತರೆ ಕವಿಗಳಂತೆ ಹೋಲಿಕೆ ಮತ್ತು ಪ್ರತಿಮೆಗಳನ್ನು ನೀಡುತ್ತಾ ಕಾವ್ಯ ಬರೆಯದೆ,ಇಡೀ ವ್ಯವಸ್ಥೆಯಲ್ಲಿನ ಜಾತಿಪದ್ಧತಿ, ಅಸಮಾನತೆ, ಅನ್ಯಾಯ, ಅಕ್ರಮಗಳೆಲ್ಲವನ್ನು ಪ್ರತಿಭಟಿಸುವ ಪ್ರತಿಭಟನೆಯ ಅಸ್ತ್ರಗಳಾಗಿದ್ದವು. ಶೋಷಕರಿಗೆ, ಶೋಷಿತರ ರೋಷ ಆಕ್ರೋಶದ ಸಿಟ್ಟನ್ನು ಮುಟ್ಟಿಸುವ ಬೆಂಕಿಯ ಜ್ವಾಲೆಗಳಾಗಿ ಹೊರಹೊಮ್ಮಿದವು. ಇವರ ಕಾವ್ಯದಲ್ಲಿ ರೂಪಕ ಪ್ರತಿಮೆಗಳು ತುಂಬಾ ಕಡಿಮೆ ಇದ್ದರೂ ಸಹ ಇವರ ಬರವಣಿಗೆ ನೇರವಾದ ನುಡಿಗಳಿಂದ ಕೂಡಿದವುಗಳಾಗಿವೆ.

ಇವರ ಎಲ್ಲಾ ಕವನ ಸಂಕಲನಗಳನ್ನು ಒಮ್ಮೆ ಅವಲೋಕಿಸಿ ನೋಡಿದಾಗ ತಮ್ಮ ಕಾವ್ಯದಲ್ಲಿ ಹಲವು ಪ್ರತಿಮೆಗಳನ್ನು ಬಳಸುತ್ತಾ ದಲಿತರ ಬದುಕನ್ನು ಕಾವ್ಯದ ವಸ್ತುವಾಗಿ ಮಾಡಿಕೊಂಡು ಬರವಣಿಗೆಯನ್ನು ಮಾಡಿದ್ದಾರೆ. ಕವಿಯ ಬರವಣಿಗೆಯಲ್ಲಿ ಸಿಟ್ಟು, ಆಕ್ರೋಶ, ದುಃಖ ಬದುಕಿನ ಸ್ಥಿತಿ ಎಲ್ಲವೂ ಚಿತ್ರಿತವಾಗಿದ್ದರೂ ಕೆಲವು ಕಡೆ ಅವುಗಳು ನೇರವಾಗಿ ವ್ಯಕ್ತಗೊಳ್ಳದೆ ರೂಪಕ ಪ್ರತಿಮೆಗಳಾಗಿ ಅವುಗಳ ಮೂಲಕ ತಮ್ಮ ಮನದಾಳದಲ್ಲಿರುವ ವಿಷಯಗಳನ್ನು, ಅಭಿಪ್ರಾಯಗಳನ್ನು ಅಭಿವ್ಯಕ್ತಗೊಳಿಸುವುದನ್ನು ಗಮನಿಸಬಹುದು.

ಕವಿಯು ಸಮಾಜದಲ್ಲಿರುವ ಅಸಮಾನತೆಯನ್ನು, ಅಸ್ಪೃಶ್ಯತಾ ಆಚರಣೆಯನ್ನು, ಸಂಪತ್ತಿನ ಅಸಮಾನ ಹಂಚಿಕೆಯನ್ನು ಸ್ತ್ರೀಯರ ಮೇಲೆ ನಡೆಯುತ್ತಿರುವ ನಿರಂತರ ದೌರ್ಜನ್ಯ ದಬ್ಬಾಳಿಕೆಯನ್ನುಕಾವ್ಯದಲ್ಲಿ ಅನಾವರಣಗೊಳಿಸತೊಡಗಿದರು.

ಡಾ. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನದಲ್ಲಿರುವ ಕವನಗಳ ಬರವಣಿಗೆಯ ಶೈಲಿ ದಲಿತರ ಬದುಕಿನ ಚಿತ್ರಣ ಮತ್ತು ಸವರ್ಣೀಯರ ಮೇಲಿನ ದಲಿತರ ಆಕ್ರೋಶ, ಸಿಟ್ಟು, ಪ್ರತಿಭಟನೆಯ ಮನೋಭಾವ ನೇರವಾಗಿಯೇ ಅಭಿವ್ಯಕ್ತಗೊಂಡಿವೆಯೇ ಹೊರತು ರೂಪಕ ಪ್ರತಿಮೆಗಳು ತುಂಬಾ ವಿರಳ. ಆದರೂ ಅಧ್ಯಯನದ ದೃಷ್ಟಿಯಿಂದ ಕೆಲವು ಪದ್ಯಗಳನ್ನು ಅವಲೋಕಿಸಿ ನೋಡಿದಾಗ ಅಲ್ಲಲ್ಲಿ ಸಣ್ಣಪುಟ್ಟ ಪ್ರತಿಮೆಗಳು ಕಂಡುಬಂದಿರುವುದನ್ನು ಗಮನಿಸಬಹುದಾಗಿದೆ.

'ಕವಿಯ ಕಾವ್ಯದ' ಬರವಣಿಗೆಯ ಸಾಲುಗಳಲ್ಲಿ ಒಂದು ರೀತಿಯಲ್ಲಿ ಯಶಸ್ಸಿನ ದಾರಿಯೂ ಇದೆ. ಹಾಗೆಯೇ ಅವರನ್ನು ಸೋಲುವವರನ್ನಾಗಿ ಮಾರ್ಪಡಿಸುವಂತಹ ಅಂಶಗಳೂ ಎದ್ದುಕಾಣುತ್ತವೆ. ಕವಿಯು ತನ್ನ ಕಾವ್ಯಬರವಣಿಗೆಯಲ್ಲಿ ತೀವ್ರತೆಯನ್ನು ಅಸಮಾನ್ಯವಾದ ರೂಪಕಶಕ್ತಿಯನ್ನು ಸಾಧಿಸಿರುವುದನ್ನು ಗಮನಿಸಬಹುದು. ಕವಿಯು ತನ್ನ ಕಾವ್ಯಶೈಲಿಯಲ್ಲಿ ಬರವಣಿಗೆಯ ಚಮತ್ಕಾರದ ಜೊತೆಗೆ ಪ್ರತಿಮೆಗಳ ನಿರೀಕ್ಷಿತ ಹೊಂದಾಣಿಕೆ ಎದ್ದು ಕಾಣುತ್ತದೆ.[೧]

ಕವಿಯ ಬರವಣಿಗೆಯು ತನ್ನ ವ್ಯಕ್ತಿತ್ವವೇ ಕಾವ್ಯದ ಮಾನವೀಯ ತುಡಿತಕ್ಕೆ ತಾಳಿಕೆಯಾಗುವಂತಿದ್ದು ಇಡೀ ಕಾವ್ಯ ದಲಿತರ ನೊಂದವರ, ಆಕ್ರಂದನವನ್ನು ಕಾವ್ಯದ ವಸ್ತುವಾಗಿಸಿಕೊಳ್ಳುತ್ತ, ದಲಿತರ ನಾಡಿಬಡಿತವನ್ನು ಅವರ ಹೃದಯಬಡಿತವನ್ನು ಅವರು ಮಿಡಿಯುತ್ತಿರುವ ಕಂಬನಿಯ ಮಿಡಿತವನ್ನೇ ಕಾವ್ಯದ ವಸ್ತುವಾಗಿಸಿಕೊಳ್ಳುತ್ತಾ ಅವರ ಬದುಕಿಗೆ ಜೀವವನ್ನು ತುಂಬುವಂತಹ ಕೆಲಸ ಮಾಡಿದರು. ತನ್ನ ಕಾವ್ಯದ ಬರವಣಿಗೆಯ ಆಶಯಗಳೆಲ್ಲವೂ ದಲಿತರ ವಿಮೋಚನೆಯ ಮಾದರಿಗಳಾಗಿ ಕಾಣದಿದ್ದರೂ ಅವರಿಗೆ ಸಾಂತ್ವನವನ್ನು ಹೇಳುವಂತಹ ನಾದಗಳಾಗಿ ಹೊರಹೊಮ್ಮಿದವುಗಳಾಗಿವೆ.[೨]

## ೧. ಸಿದ್ಧಲಿಂಗಯ್ಯನವರ ಕಾವ್ಯದ ವಸ್ತು

ಡಾ. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನದ ಮೊದಲ ಕವನವಾದ 'ನನ್ನ ಜನಗಳು' ಕವನವನ್ನು ಅವಲೋಕಿಸಿದಾಗ ಈ ಕವನದ ಶೀರ್ಷಿಕೆಯೇ ತಿಳಿಸುವಂತೆ ದಲಿತರ ದಿನನಿತ್ಯದ ಕಾಯಕ, ಕೂಲಿ ಕಾರ್ಮಿಕರ ಪರಿಸ್ಥಿತಿ ಜೊತೆಗೆ ತಾವು ದಿನ ನಿತ್ಯ ತನ್ನ ಬದುಕಿನೊಡನೆ ಉಂಡ ನೋವುಗಳನ್ನೇ ಹಾಡುಗಳಾಗಿ ರೂಪಿಸುವಂತಹ ವಸ್ತು ಇಲ್ಲಿ ಅಡಕವಾಗಿದೆ.

'ಒಂದು ಮೂಳೆಯ ಹಾಡು' ಕವಿತೆಯಲ್ಲಿ ಉಳ್ಳವರು, ದಲಿತರ ಮತ್ತು ಅಸಹಾಯಕರ ಮೇಲೆ ನಡೆಸುತ್ತಿರುವಂತಹ ನಿರಂತರ ದಬ್ಬಾಳಿಕೆಯನ್ನು ಖಂಡಿಸುವಂತಹ ಮುಖ್ಯ ವಿಷಯವನ್ನು ಒಳಗೊಂಡಿರುವುದನ್ನು ಕಾಣುವುದರ ಜೊತೆಗೆ ಅದರ ವಿರುದ್ಧ ದಲಿತರು ಬ ಂಡೇಳುವ ವಿಷಯವನ್ನು ಒಳಗೊಂಡಿದೆ.

ಕವಿಯ ಬರವಣಿಗೆಯ ಕಾಲಘಟ್ಟವು ದಲಿತರ ಜೀವನ ಕ್ರಮವನ್ನು ಇಡೀ ಸಮಾಜಕ್ಕೆ ಪರಿಚಯಿಸುವ ಹಿಂದೂ ಸಮಾಜ ಸಂಸ್ಕೃತಿಯಲ್ಲಿ ತುಳಿತಕ್ಕೊಳಪಟ್ಟ ದೀನ ದಲಿತರ ಬದುಕನ್ನು ಸರಿದೂಗಿಸುವ ಮತ್ತು ಅಸಮಾನತೆಯನ್ನು ಹೋಗಲಾಡಿಸಿ ಸಾಮಾಜಿಕ ಸಮಾನತೆಯನ್ನು ಸೃಷ್ಟಿಸುವಂತಹ ಅಗತ್ಯತೆ ತುಂಬಾ ಇತ್ತು. ಹೊಲೆಯ ಮತ್ತು ಮಾದಿಗ ಜಾತಿಯ ಜನರು ಸಾಮಾಜಿಕವಾಗಿ ತುಳಿತಕ್ಕೊಳಪಟ್ಟ ಜನಾಂಗವಾದ್ದರಿಂದ ಆ ಜನಾಂಗದಲ್ಲಿಯೇ ಜನಿಸಿದ ಕವಿಯು ಕೂಡಾ ಸಾಮಾಜಿಕ ಅಸಮಾನತೆಯ ಎಲ್ಲಾ ನೋವುಂಡವರಾದ್ದರಿಂದ ತಮ್ಮ ಅಂತರಾಳದ ಯಾತನೆಗಳೇ ಕಾವ್ಯದ ವಸ್ತುವಾಗ ತೊಡಗಿದವು. ಆ ಜನಾಂಗವನ್ನು ಕುರಿತು ಕಾವ್ಯ ರಚಿಸಿದ್ದರಿಂದಲೇ ಆ ಕವನ ಸಂಕಲನಕ್ಕೆ 'ಹೊಲೆಮಾದಿಗರ ಹಾಡು' ಎಂದು ಶೀರ್ಷಿಕೆಯನ್ನು ಇಡಲಾಗಿದೆ. ಎಂದು ಭಾವಿಸಬಹುದು.

'ಹೊಲೆ ಮಾದಿಗರ ಹಾಡು' ಕವಿತೆಯಲ್ಲಿ ಬರುವ ಒಂದುಪದ ಕವನದಲ್ಲಿ ದಲಿತರು ಸವರ್ಣೀಯರ ತುಳಿತಕ್ಕೊಳಗಾಗಿ ತುಂಬಾ ಬೇಸತ್ತು, ರೋಸಿ ಹೋಗಿದ್ದು ಅಂತಹ ದಬ್ಬಾಳಿಕೆಯ ವಿರುದ್ಧ ಬಂಡೆದ್ದಂತಹ ಅವರ ಅಟ್ಟಹಾಸವನ್ನು ಮೆಟ್ಟಿ ನಿಲ್ಲಲು ಇಡೀ ದಲಿತ ಜನಾಂಗವನ್ನೇ ಒಗ್ಗೂಡಿಸುವಂತಹ ಪ್ರಮುಖ ಅಂಶಗಳನ್ನು ಕಾಣಬಹುದು. ಹಾಗೆಯೇ ಸತ್ತೋ ಗೋರಾ ಕವಿತೆಯಲ್ಲಿ ರಾಜಕೀಯ ಪುಡಾರಿಗಳು ತಮ್ಮ ಪಟ್ಟಭದ್ರ

ಹಿತಾಶಕ್ತಿಗಳಿಗಾಗಿ ಇಡೀ ದಲಿತ ಜನಾಂಗವನ್ನು, ಬಡವರನ್ನು ತಮ್ಮ ಆಶ್ವಾಸನೆಯ ಮೂಲಕ ನಂಬಿಸಿ ಮೋಸಮಾಡುವ, ಕುರ್ಚಿಗಾಗಿ ಕಿತ್ತಾಡುತ್ತಾ ತಮ್ಮ ರಾಜಕೀಯ ಶಕ್ತಿಯನ್ನು ಬಲಪಡಿಸಿಕೊಳ್ಳುವಂತಹ ಪ್ರಮುಖ ವಸ್ತುವನ್ನು ಒಳಗೊಂಡಿದೆ. ಕ್ರಾಂತಿಪದ ಕವಿತೆಯು ಬಡವರು ಬಡವರಾಗಿಯೇ ಉಳಿದಿರುವ ಶ್ರೀಮಂತರು ಬಂಗಲೆಗಳಲ್ಲಿ ವಾಸಿಸುತ್ತಾ ಬಡವರ ಮೇಲೆ ಸವಾರಿ ಮಾಡುತ್ತಿರುವ ವಸ್ತುವನ್ನು ಒಳಗೊಂಡಿದೆ. ಜೊತೆಗೆ ದಲಿತರು ಜೀವಂತವಾಗಿದ್ದರೂ ಸತ್ತಶವಗಳಾಗಿ ಬದುಕುವಂತೆ ಕಾಣುತ್ತಿರುವ ಅವರ ಬದುಕನ್ನು ಸರಿದೂಗಿಸಲು ಶ್ರಮಿಸದ ರಾಜಕೀಯ ವ್ಯಕ್ತಿಗಳನ್ನು ಹತ್ತಿಕ್ಕುವ ಪ್ರತಿಭಟನಾತ್ಮಕ ವಸ್ತುವನ್ನು ಈ ಕವನ ಒಳಗೊಂಡಿದೆ.

'ಗಳ್ಡಗಳು' ಅಡಗೂಲಜ್ಜಿ ಕತೆ, ಹಬ್ಬ, ಸುಂಟರಗಾಳಿ, .....ಕವಿತೆಗಳನ್ನು ಒಮ್ಮೆ ಅವಲೋಕಿಸಿದಾಗಲೂ ಸಹ ಈ ಎಲ್ಲಾ ಕವನಗಳಲ್ಲೂ ಕವಿಯು ರಾಜಕೀಯ ವ್ಯವಸ್ಥೆಯನ್ನು ಪ್ರಶ್ನಿಸುವ ಇಡೀ ರಾಜಕೀಯ ವ್ಯವಸ್ಥೆಯಿಂದ ದಲಿತರು ಮುಖ್ಯವಾದ ಸವಲತ್ತುಗಳಿಂದ ವಂಚಿತರಾಗಿದ್ದು ಸಮಾಜದ ಕೆಳಸ್ತರದಲ್ಲಿ ಬದುಕುತ್ತಿರುವಂತಹ, ಪರಿಸ್ಥಿತಿಯನ್ನು ಹಾಗೂ ರಾಜಕೀಯ ವ್ಯವಸ್ಥೆಯ ಕಡೆಗೆ ಇಡೀ ದಲಿತ ಸಮುದಾಯವನ್ನು ಎಚ್ಚರಿಸುವಂತಹ ಪ್ರಮುಖ ವಸ್ತು ಈ ಕವನದಲ್ಲಿ ಅಡಕವಾಗಿದೆ.

'ಕನ್ನಡವ್ವನಿಗೆ' ಕವಿತೆಯಲ್ಲಿನ ಮುಖ್ಯವಸ್ತುವೆಂದರೆ ಇಡೀ ಸಾಮ್ರಾಜ್ಯವೇ ಪುರೋಹಿತಶಾಹಿ ವ್ಯವಸ್ಥೆಯ ಪರವಾದ್ದದ್ದು, ಪುರೋಹಿತ ವ್ಯವಸ್ಥೆಮತ್ತು ಅವರ ಬದುಕು ಸುಖಮಯವಾಗಿದ್ದರೆ ಇಡೀ ನಾಡೇ ಸುಭಿಕ್ಷೆಯಿಂದಿರಲು ಸಾಧ್ಯವೇ ಎಂಬ ವ್ಯಂಗ್ಯತೆಯನ್ನು ಕವಿ ತನ್ನ ಕಾವ್ಯದ ವಸ್ತುವಾಗಿಸಿಕೊಂಡಿದ್ದಾರೆ.

ಇವರ ಕವನಗಳಾದ 'ಹಣೆಬರವು' ಎಂಬ ನಾಟಕವು 'ನನ್ನವಳಿಗೆ, ಭವಿಷದ್ಗೀತೆ, ನಗ್ಬೇಕು, ಮುಂತಾದವುಗಳು ಇಡೀ ಸಾಮಾಜಿಕ ವ್ಯವಸ್ಥೆಯಲ್ಲಿನ ಅಸಮಾನತೆಯನ್ನು ಹೋಗಲಾಡಿಸಲು ಪ್ರಯತ್ನಿಸುವ ಪುರೋಹಿತಶಾಹಿ ವ್ಯವಸ್ಥೆಯನ್ನು ತೊಡೆದು ಹಾಕುವಂತಹ, ಗೊಡ್ಡು ಸಂಪ್ರದಾಯಗಳನ್ನು ದೂರಸರಿಸುವಂತಹ ಸಂಪ್ರದಾಯ ಶರಣರಾಗಿ ಗುಲಾಮರಂತೆ ಬದುಕಿದ್ದಂತಹ ದಲಿತರನ್ನು ಬಿಡುಗಡೆಗೊಳಿಸುವಂತಹ ಪ್ರಮುಖ ವಸ್ತುವನ್ನು ಈ ಕವನಗಳಲ್ಲಿ ಕಾಣಬಹುದಾಗಿದೆ. ಹಾಗೆಯೇ 'ಬೀಳು' ಮಸಣದ

ಚೆಲುವೆಗೆ' ಎಂಬ ಕವನಗಳು ದಲಿತ ಹೆಣ್ಣು ಮಗಳೊಬ್ಬಳ ಅಸಹಾಯಕ ಬದುಕು ಅವಳು ತೊಡುವ ಉಡುಗೆ ಅವುಗಳಲ್ಲಿನುಸುಳುತ್ತಿರುವ ಗಾಳಿ ಮತ್ತು ಅವಳ ಮೇಲೆ ಬೀಳುತ್ತಿರುವ ಕಾಮುಕರ ಕಣ್ಣು ಅದರಿಂದ ಅವಳ ಬದುಕು ಸಾವಿನ ಕ ಡೆಗೆ ಜಾರುತ್ತಿರುವ ಸ್ಥಿತಿ ಈ ಎಲ್ಲಾ ವಸ್ತುವನ್ನು ಒಳಗೊಂಡಿವೆ.

ಅಂಬೇಡ್ಕರ್ ಕವಿತೆಯು ಇಡೀ ರಾಷ್ಟ್ರದಾದ್ಯಂತ ನೊಂದವರ , ದಲಿತರ, ಅಸಹಾಯಕರಾಗಿ ಬದುಕುತ್ತಿದ್ದವರಿಗೆ ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಂವಿಧಾನಿಕವಾಗಿ ಸಮಾನತೆಯನ್ನು ತಂದುಕೊಡಲು ಪ್ರಯತ್ನಿಸಿ ಅದರಲ್ಲಿ ಯಶಸ್ಸನ್ನು ತಂದುಕೊಟ್ಟಂತಹ ಬಾಬಾಸಾಹೇಬ್ ಡಾ. ಅಂಬೇಡ್ಕರ್‌ರವರನ್ನೇ ಕಾವ್ಯದ ವಸ್ತುವಾಗಿಸಿಕೊಂಡು ಅವರ ಹೋರಾಟದ ಕ್ರಾಂತಿಯ ನಡೆಯನ್ನು ಜನರಲ್ಲಿ ಮೂಡಿಸುವಂತಹ ಆಶಯವನ್ನು ಒಳಗೊಂಡಿದೆ.

ಡಾ. ಸಿದ್ಧಲಿಂಗಯ್ಯನವರ ನಾವು 'ಒಂದು ದನದ ಪದ, ಹಾವುಗಳೇ ಕಚ್ಚಿ, ಕವನಗಳಲ್ಲಿ ದಲಿತರನ್ನು ನಿಕೃಷ್ಟವಾಗಿ ಕಾಣುವಂತಹ ಪರಿಸ್ಥಿತಿಯನ್ನು ದನಕ್ಕೆ ಕೊಡುವ ಗೌರವ ಮರ್ಯಾದೆಗಳನ್ನು ಮಾನವೀಯ ಮೌಲ್ಯಗಳಿರುವ ದಲಿತರಿಗೆ ನೀಡದಿರುವ ಸವರ್ಣೀಯರ ಜನರ ಬಂಡತನವನ್ನು ಈ ಕಾವ್ಯಗಳಲ್ಲಿ ವಸ್ತುವಾಗಿಸಿಕೊಂಡಿದ್ದಾರೆ.

ಒಟ್ಟಾರೆಯಾಗಿ ಡಾ. ಸಿದ್ಧಲಿಂಗಯ್ಯನವರು ತಮ್ಮ ಮೊದಲ ಕವನ ಸಂಕಲನವಾದ 'ಹೊಲೆ ಮಾದಿಗರ ಹಾಡು' ಸಂಕಲನದಲ್ಲಿ ಇಡೀ ದಲಿತರ ಬದುಕಿನ ಚಿತ್ರಣವನ್ನು ಅನಾವರಣಗೊಳಿಸುವ ದಲಿತರನ್ನು ರಾಜಕೀಯವಾಗಿ ಜಾಗೃತಗೊಳಿಸುವ ದಲಿತರ ಮೇಲೆ ನಡೆಸುತ್ತಿರುವ ನಿರಂತರ ದಬ್ಬಾಳಿಕೆ ದೌರ್ಜನ್ಯಗಳನ್ನು ಖಂಡಿಸಿ ಅದರ ವಿರುದ್ಧ ಕ್ರಾಂತಿಯ ಕಿಡಿಯನ್ನು ಹಚ್ಚುವಂತಹ ಹಾಗೂ ಇಡೀ ಸಮಾಜದಲ್ಲಿರುವ ಜಾತಿಯ ಅಸಮಾನತೆ, ಧಾರ್ಮಿಕ ಅಸಮಾನತೆ ದಲಿತ ಹೆಣ್ಣುಮಕ್ಕಳ ಮೇಲೆ ಸವರ್ಣೀಯರು, ರಾಜಕೀಯ ಪುಡಾರಿಗಳು ನಡೆಸುತ್ತಿರುವ ನಿರಂತರ ದೌರ್ಜನ್ಯಗಳು, ಆಕ್ರಮಣಗಳನ್ನು ಪ್ರತಿಭಟಿಸಿ ನಿಲ್ಲುವಂತಹ ಪ್ರಮುಖ ವಸ್ತುವನ್ನು ಒಳಗೊಂಡಿರುವುದನ್ನು ಕಾಣಬಹುದಾಗಿದೆ.

ಹೋರಾಟದ ರಂಗವೆಂಬುದು ಒಂದು ಸಮುದ್ರದಂತಿದ್ದು ಆ ಸಮುದ್ರಕ್ಕೆ ಹೇಗೆ ಸಾವಿರಾರು ನದಿಗಳು ಬಂದು ಸೇರುತ್ತಾ ಅದರ ಪ್ರಮಾಣತೆ ದೊಡ್ಡದಾಗುವುದೋ

ಹಾಗೆಯೇ ಹೋರಾಟವೆಂಬ ಸಮುದ್ರಕ್ಕೆ ಸಾವಿರಾರು ಜಾತಿಗಳು, ಉಪಜಾತಿಗಳು ಬಂದು ಸೇರುವುದರಿಂದ ಕವಿ ತನ್ನ ಕವನ, ಸಂಕಲನಕ್ಕೆ 'ಸಾವಿರಾರು ನದಿಗಳು' ಎಂದು ಶೀರ್ಷಿಕೆ ನೀಡಿದ್ದಾರೆ ಎನಿಸುತ್ತದೆ.

ಕೇವಲ ದಲಿತರ ಸಾಮಾಜಿಕ ಪರಿವರ್ತನೆಗೆ ಸೀಮಿತವಾಗಿದ್ದ ಕವಿಯ ಮನಸ್ಸು ವರ್ಗ ಸಂಘರ್ಷದೆಡೆಗೆ ವಾಲುತ್ತಾ ರೈತರ, ಕೂಲಿ ಕಾರ್ಮಿಕರ, ಶ್ರಮಿಕ ವರ್ಗದವರ, ವಿಮೋಚನೆಯ ಅಂಶಗಳು ಈ ಕವನ ಸಂಕಲನದಲ್ಲಿ ಅಡಗಿವೆ.

ಇವರ ಕವನಗಳಾದ 'ಸಾವಿರಾರು ನದಿಗಳು' ಕವನವು ಎಲ್ಲಾ ವರ್ಗದ ಜನರನ್ನು ಹೋರಾಟದ ಹಾದಿಗೆ ಕರೆದೊಯ್ಯುವ ಅವರನ್ನು ಸವಾಜದ ಪರಿವರ್ತನೆಗೆ ಅಣಿಗೊಳಿಸುವ ಮುಖ್ಯ ವಸ್ತುವನ್ನೊಳಗೊಂಡಿದೆ. ಬೆಲ್ಜಿಯ ಹಾಡು ಕವನವು ಉಳ್ಳವರು ನಿರಂತರವಾಗಿ ಕೂಲಿ ಕಾರ್ಮಿಕ ಶ್ರಮದ ಪ್ರತಿಫಲದಲ್ಲಿ ಸುಖವನ್ನು ಕಾಣುವ, ಶ್ರಮಿಕ ವರ್ಗದ ಹೆಣ್ಣುಮಕ್ಕಳ ಸೆರಗಿನಲ್ಲಿ ಸುಖವನ್ನು ಅನುಭವಿಸುವ ವಸ್ತುವನ್ನೊಳಗೊಂಡಿದೆ.

'ಕೆಂಪುಸೂರ್ಯ' ಕವಿತೆಯಲ್ಲಿ ಕಾರ್ಮಿಕರು ಮತ್ತು ದಲಿತರು ಅಸಮಾನತೆಯ ವಿರುದ್ಧ ಎಚ್ಚೆತ್ತ ಸಿಂಹಗಳಾಗಿ ಬಿರುಗಾಳಿಗಳಾಗಿ ಹೊಸದೊಂದು ಪರಿವರ್ತನೆಯ ಮೂಲ ವ್ಯಕ್ತಿಗಳಾಗಿ ಹಬ್ಬದೂಟಕ್ಕೆ ತಯಾರಾಗಿ ನಿಲ್ಲುವಂತಹ ಚಿತ್ರಣವೆ ಈ ಕವಿತೆಯ ವಸ್ತು ಹಾಗೆಯೇ 'ದಲಿತರು ಬರುವರು' ಕವಿತೆಯಲ್ಲಿ ಕವಿಯು ದಲಿತರು ಇದುವರೆವಿಗೂ ನೊಂದು ಬೆಂದು ಬದುಕಿರುವ ಕತೆಯನ್ನು ಹೇಳುವುದರೊಂದಿಗೆ ಅವರು ಇಂದು ಒಂದು ರಾಜಕೀಯ ಶಕ್ತಿಯಾಗಿ ಹೊರಹೊಮ್ಮುತ್ತಿದ್ದಾರೆ ಅವರನ್ನು ರಾಜಕೀಯ ರಂಗದಲ್ಲಿ ತೊಡಗಿಸಿಕೊಳ್ಳಲು ಅವಕಾಶ ಬೇಕು. ಅವರು ರಾಜಕೀಯ ಮಾಡಲು ಸಮರ್ಥರು ಎಂಬುದನ್ನು ಸಾರುತ್ತಿದೆ.

'ಬಿದ್ದಾವು ಮನೆಗಳು' ಕವಿತೆಯಲ್ಲಿ ಕವಿಯು ಮನೆಗಳನ್ನು ವಸ್ತುವಾಗಿಸಿಕೊಂಡು ಗುಡಿಸಲುಗಳು ಗುಡಿಸಲುಗಳಾಗಿ ಉಳಿಯುತ್ತಿದ್ದರೆ ಬಂಗಲೆಗಳು ಐತಿಹಾಸಿಕ ಗಗನಚುಂಬಿ ಕಟ್ಟಡಗಳಾಗಿ ತಲೆ ಎತ್ತಿ ಬಡವರ ಪರಿಸ್ಥಿತಿಯನ್ನು ಕಂಡು ಕೇಕೆ ಹಾಕಿ ನಗುತ್ತಿರುವ, ಬಡವರ ಬದುಕು ಬೀದಿ ಪಾಲಾಗಿರುವ, ಬಡವರು ಅನ್ನಕ್ಕಾಗಿ ಅಲೆದಾಡುತ್ತಾ ಆಹಾರವಿಲ್ಲದೆ ಶವಗಳಾಗುವ, ಬಡವರ ಬದುಕಿನ ಮೇಲೆ ಬಂಗಲೆಗಳನ್ನು ನಿರ್ಮಿಸಿ ಶ್ರೀಮಂತರು ನುಗುತ್ತಿರುವುದನ್ನು ಕಾಣಬಹುದಾಗಿದೆ.

'ಕತ್ತೆ ಮತ್ತು ಧರ್ಮ' ಕವಿತೆಯನ್ನು ಬರೆಯುವ ಕವಿಯು ಆ ಕಾಲಘಟ್ಟದಲ್ಲಿನ ಮೌಢ್ಯತೆಯಲ್ಲಿ ಜನರ ಮೂರ್ಖತೆಯನ್ನು ವಿಡಂಬನೆಯ ಮೂಲಕ ಚಿತ್ರಿಸಿದ್ದಾನೆ. ಗೋರಿ ದೇವರ ಪಿತಾಮಹ ಸಿದ್ಧಯ್ಯನದಾರೂ ಆತ ಅದರಿಂದ ಹೊರಗುಳಿದಿದ್ದಾನೆ. ಆದರೆ ಅವೈಜ್ಞಾನಿಕ ಪದ್ಧತಿಯನ್ನೇ ನಂಬಿರುವ ಶ್ರೀಮಂತರು ಅಲ್ಲಿ ದೊಡ್ಡ ಗುಡಿ ನಿರ್ಮಿಸಿ ಪೂಜಿಸುತ್ತಿದ್ದಾರೆ. ಆದರೆ ಕವಿ ಧರ್ಮದ ಅಸ್ತಿತ್ವವನ್ನೇ ವಿಡಂಬನೆಯ ಮೂಲಕ ಪ್ರಶ್ನಿಸಿದ್ದಾರೆ. ಜೊತೆಗೆ ಸಿದ್ಧಯ್ಯನ ಮುಗ್ಧತೆ ಮತ್ತು ಆತನ ಒಡನಾಡಿಯ ಬಗೆಗಿದ್ದ ಪ್ರೀತಿ, ಮತ್ತು ಅದನ್ನು ಕಳೆದುಕೊಂಡಾಗ ಆತನಿಗಾಗುವ ಯಾತನೆ, ಅದನ್ನೇ ಹುಡುಕುವ ಆತನ ತಳಮಳ ಈ ಕವನದ ವಸ್ತುವಾಗಿವೆ.

'ಈ ದೇಶದ ಸೆರೆಮನೆ'ಇರಾನಿ ಭಾಷೆಯ ಭಾವಾನುವಾದವಾದರೂ ಸೆರೆ ಸಿಕ್ಕ ಗೆಳೆಯನೊಬ್ಬನ ಸಂಕಟವನ್ನು ಒಳಗೊಂಡಿದೆ ಮತ್ತು ಅದು ಸೆರೆಯಾಳುಗಳಾಗಿರುವವರ ಜೊತೆಗೆ ಸೇರುವ ಇನ್ನೊಂದು ಹೋರಾಟದ ಕಿಡಿಯಾಗಿದೆ ಎಂದು ತೋರಿಸಿದ್ದಾರೆ. ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡುತ್ತಾ ಸೆರೆಯಾಳುಗಳಾಗಿ ಬಂಧಿತರಾಗುವುದು, ಅವರ 'ಕಂಡೆ ನನ್ನವಳಒಂದು ದಿನ' ಕವಿತೆಯಲ್ಲಿ ಇಡೀ ದೇಶವು ದುಃಸ್ಥಿತಿಗೆ ಇಳಿದಿರುವ ವಸ್ತುವನ್ನು ಮತ್ತು ಹೆಣ್ಣಿನ ಬದುಕನ್ನು ಅನಾವರಣಗೊಳಿಸುವ ಭಾರತ ದೇಶ ಇಂದು ಘೋರಾಂಧಕಾರದಲ್ಲಿ ಇದೆ. ಭಾರತಮಾತೆಯೇ ಉಸಿರುಗಟ್ಟಿ ಬದುಕುತ್ತಿರುವ ಮೂಲ ಆಶಯವನ್ನು ಒಳಗೊಂಡಿದೆ.

'ಹೋರಾಟದ ದಾರಿ' ಕವಿತೆಯು ಅಸಹಾಯಕರಾಗಿ ನಿರರ್ಥಕವಾಗಿ ಕೈ ಚೆಲ್ಲಿ ಕುಳಿತಿರುವ, ಕಾರ್ಮಿಕರನ್ನು, ಈ ದಲಿತರನ್ನು ಅಸಮಾನತೆಯ ವಿರುದ್ಧ ಹೋರಾಟವನ್ನು ಮಾಡಲು ಅಣಿಗೊಳಿಸುವಂತಹ ಮುಖ್ಯ ವಸ್ತುವನ್ನೊಳಗೊಂಡಿದೆ.ನಿನ್ನ ಮಗನ ಕೊಂದರು' ಕವಿತೆಯು ಬ್ರೆಕ್ಟ್ ಕವಿಯ ಮದರ್'ನಾಟಕದ ವಿಷಯವನ್ನೇ ಒಳಗೊಂಡಿದ್ದರೂ ತಾಯಿ ತನ್ನ ಮಗನ ಬಿಡುಗಡೆಗಾಗಿ ಪರಿತಪಿಸುವ, ಮಗನ ಮರಣದ ನಂತರ ಉಳ್ಳವರ ವಿರುದ್ಧ ಕಾರ್ಮಿಕರ ಪರವಾದ ಹೋರಾಟಕ್ಕೆ ಎಲ್ಲರನ್ನು ಸಜ್ಜುಗೊಳಿಸುವ ಆಶಯವನ್ನೊಳಗೊಂಡಿದೆ.

ಕವಿಯ 'ಚೋಮನ ಮಕ್ಕಳಹಾಡು' ಮಾತಾಡಬೇಕು, ಮೆರವಣಿಗೆ ಕವನಗಳೆಲ್ಲವೂ ಉಳ್ಳವರು ದಲಿತರ ಮತ್ತು ಕಾರ್ಮಿಕರ ಮೇಲೆ ನಡೆಸುತ್ತಿರುವ ನಿರಂತರ

ದೌರ್ಜನ್ಯ ದಬ್ಬಾಳಿಕೆಯನ್ನು ಚಿತ್ರಿಸಲಾಗಿದೆ. ಮತ್ತು ಚೋಮನ ಮಕ್ಕಳ ಹಾಡು ಕವಿತೆಯು ಚೋಮನ ಬದುಕಿನ ಸ್ಥಿತಿಯನ್ನು ತನ್ನ ಮಕ್ಕಳ ಮನದಾಳದ ಆಸೆ, ನೋವು, ಸಿಟ್ಟು, ಎಲ್ಲವನ್ನು ಚಿತ್ರಿಸಲಾಗಿದೆ. ಅವರ 'ಮೆರವಣಿಗೆ' ಕವಿತೆಯು ಕಿತ್ತು ತಿನ್ನುವ ಜಾತಿ ವ್ಯವಸ್ಥೆ ಧರ್ಮ ರಾಜಕಾರಣ ಎಲ್ಲವೂ ಇಡೀ ವ್ಯವಸ್ಥೆಯನ್ನು ಅಸಮಾನವಾಗಿಟ್ಟಿದೆ. ಆದ್ದರಿಂದ ಹೊಸದೊಂದು ಬದುಕನ್ನು ಕಾಣಬೇಕೆಂಬುದು ಈ ಕವಿತೆಯ ಆಶಯವಾಗಿದೆ.

'ಬಂದಿರುವವರು ಹುಲಿಗಳಾಗಿ' 'ಅಲ್ಲೇ ಕುಂತವರೆ' ಕವಿತೆಯಲ್ಲಿ ಬಂದಿರುವವರು ಹುಲಿಗಳಾಗಿ ಕವಿತೆಯಲ್ಲಿ ಶ್ರೀಮಂತರು ಬಡವರನ್ನು ಶೋಷಿಸುವ ಮತ್ತು ಸೊಕ್ಕಿನಿಂದ ಬದುಕುವ, ಅಧಿಕಾರದ ದರ್ಪವನ್ನು ತೋರುವ ಕೇವಲ ನಯ ವಂಚಕತೆಯ ಭಾಷಣಗಳನ್ನು ಮಾಡುತ್ತಾ ಬಡವರನ್ನು ಬಡವರಾಗಿಯೇ ಕಷ್ಟ ಕೂಪದಲ್ಲಿ ತಳ್ಳುವ ವಸ್ತುವನ್ನೊಳಗೊಂಡಿದೆ. 'ಅಲ್ಲೆ ಕುಂತವರೆ' ಕವಿತೆಯು ಒಂದು ಖಂಡಕಾವ್ಯದಂತಿದ್ದರೂ ಅದು ಅಂದಿನ ರಾಜಕೀಯ ವ್ಯವಸ್ಥೆಯನ್ನು ಬಡಜನರು ಅನ್ನ ನೀರಿಗಾಗಿ ಅಲೆದಾಡುವ ಪರಿಸ್ಥಿತಿಯನ್ನು ಚಿತ್ರಿಸಲಾಗಿದೆ. ಒಟ್ಟಿನಲ್ಲಿ ಇಡೀ ಕವಿತೆಯು ಬರವಣಿಗೆಯ ಸಮಕಾಲೀನ ರಾಜಕಾರಣವನ್ನೇ ಕಾವ್ಯದ ವಸ್ತುವಾಗಿಟ್ಟುಕೊಂಡು ಬರೆದಂತಹ ಒಂದು ಖಂಡಕಾವ್ಯವಾಗಿದೆ.

ಒಟ್ಟಿನಲ್ಲಿ ಕವಿಯು 'ಸಾವಿರಾರು ನದಿಗಳು' ಕವನ ಸಂಕನಲವನ್ನು ಬರೆಯುವಾಗ ಸಮಾಜದೊಳಗೆ ತುಳಿತಕ್ಕೊಳಗಾಗಿದ್ದ ದಲಿತರನ್ನೇ ಕಾವ್ಯದ ವಸ್ತುವಾಗಿಸಿಕೊಳ್ಳದೆ ಒಂದು ಹೆಜ್ಜೆ ಮುಂದೆ ಸರಿದು ಇಡೀ ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮಾನತೆಗೊಳಗಾದ ರೈತರು, ಕಾರ್ಮಿಕರು, ಜೀತದಾಳುಗಳು, ದಲಿತರು, ಹೆಣ್ಣಿನ ಅಸಹಾಯಕ ಬದುಕು, ತನ್ನ ಬರವಣಿಗೆಯ ಕಾಲಘಟ್ಟದಲ್ಲಿ ನಡೆಯುತ್ತಿದ್ದಂತಹ ಧರ್ಮರಾಜಕಾರಣ, ಜಾತಿ ರಾಜಕಾರಣ, ರಾಜಕೀಯ, ಪುಢಾರಿಗಳ ಪುಂಡಾಟಿಕೆಯ ಮಾತುಗಳು, ರಾಜಕೀಯ ವ್ಯವಸ್ಥೆಯೊಳಗೆ ನಿಲಕ್ಷ್ಯಕ್ಕೊಳಗಾದ ಜನರ ಪರಿಸ್ಥಿತಿ, ಬಂಡವಾಳಗಾರರು, ಕಾರ್ಮಿಕರ ಮೇಲೆ ನಡೆಸುವ ನಿರಂತರ ದೌರ್ಜನ್ಯ, ದಬ್ಬಾಳಿಕೆಗಳು, ಅವೈಜ್ಞಾನಿಕ ಪದ್ಧತಿಯ ಆಚರಣೆಗಳು ಸಿದ್ಧಯ್ಯನಂತಹ ಮುಗ್ಧ ಮನಸ್ಸಿನ ಚಿತ್ರಣ, ಮತ್ತು ಶೋಷಣೆಗೆ ಒಳಗಾದವರು ಸಮಾಜ ಪರಿವರ್ತನೆಗಾಗಿ ನಡೆಸುವ ಹೋರಾಟದ ಮನೋಭಾವ ಎಲ್ಲವೂ ಈ ಕವನ ಸಂಕಲನಗಳಲ್ಲಿ ವಸ್ತುವಾಗಿ ಹೊರಹೊಮ್ಮಿರುವುದನ್ನು ಕಾಣಬಹುದಾಗಿದೆ.

ಡಾ. ಸಿದ್ಧಲಿಂಗಯ್ಯನವರು ತಮ್ಮ ಮೂರನೇ ಕವನ ಸಂಕಲನವಾದ 'ಕಪ್ಪುಕಾಡಿನ ಹಾಡು' ಕವಿತೆಗಳನ್ನು ಬರೆಯುವಾಗ, 'ಹೊಲೆಮಾದಿಗರ ಹಾಡು' 'ಸಾವಿರಾರು ನದಿಗಳು' ಕವನ ಸಂಕಲನ ಬರೆದಾಗ ಅವರಿಗಿದ್ದ ಸಿಟ್ಟು ಆಕ್ರೋಶ ಇಲ್ಲ. ಅದು ಕಡಿಮೆಯಾಗಿದೆ ನಿಜ. ಆದರೆ ಅವರು ಪರಿಸ್ಥಿತಿಯೊಡನೆ ರಾಜಿ ಮಾಡಿಕೊಂಡಿದ್ದಾರೆಂದಲ್ಲ. ಜೊತೆಗೆ ಅವರು ದಲಿತರ ಜೊತೆಗೆ ಇತರ ಎಲ್ಲಾ ವರ್ಗಗಳ ಕಷ್ಟಕೋಟಲೆಗಳನ್ನು ಮಾನವೀಯ ದೃಷ್ಟಿಯಿಂದ ಸಮತೋಲನವಾಗಿ ನೋಡುವ ಮನೋಭಾವವುಳ್ಳವರಾಗಿದ್ದಾರೆ.[೪] ಕವಿಯು ಕಪ್ಪುಕಾಡಿನ ಹಾಡುಗಳ ಕವನಗಳನ್ನು ಬರೆಯುವ ಸಂದರ್ಭಕ್ಕೆ ಅವರ ಮನಸ್ಸು ಮಾಗಿದೆ. ಅವರ ಚಿಂತನಾಕ್ರಮ ಮತ್ತು ಸಮಾಜವನ್ನು ನೋಡುವ ನೋಟ ಬದಲಾಗಿದೆ. ಈ ದೃಷ್ಟಿಯಿಂದ ಅವರ ಮೊದಲೆರಡು ಕವನ ಸಂಕಲನದಲ್ಲಿನ ಕಾವ್ಯದ ವಸ್ತುಗಳಿಗಿಂತ ಭಿನ್ನ ರೀತಿಯಲ್ಲಿ ಈ ಕವನ ಸಂಕಲನದ ವಸ್ತು ಅಡಕಗೊಂಡಿದೆ.

ಕ್ರಾಂತಿಯ ಕಿಡಿಗಳನ್ನು ಹಚ್ಚುವ ರೀತಿಯಲ್ಲಿ ಬಂಡಾಯದ ಧ್ವನಿಯನ್ನು ಹೊಂದಿದ್ದ ಕವಿಯು ತನ್ನ ಬರವಣಿಗೆಯ ಶೈಲಿಯಲ್ಲಿ ಬದಲಾವಣೆ ಕಂಡುಕೊಳ್ಳಲು ಮುಖ್ಯ ಕಾರಣವೆಂದರೆ 'ವಾಚ್ಯವಾಗಿದ್ದ ಇವರ ಧ್ವನಿ ಈ ಕವನ ಸಂಕಲನದಲ್ಲಿ ಸೂಚಕವಾಗಿ ವಾಸ್ತವದ ಸಂಕೀರ್ಣತೆ, ರೋಷದ ಆಳದ ನೋವು, ಹತಾಶೆ, ನಿರಾಶೆ ಎಲ್ಲವೂ ಸಾಂಕೇತಿಕವಾಗಿ ತಮ್ಮ ಕವನಸಂಕಲನದಲ್ಲಿ ವ್ಯಕ್ತವಾಗುತ್ತಿವೆ.'[೫]

ಕವಿಯು 'ಕಪ್ಪುಕಾಡಿನ ಹಾಡು'ವಿನ ಕವನಗಳನ್ನು ಬರೆಯುವಾಗ ಕ್ರಾಂತಿ ಹೋರಾಟ, ಪ್ರತಿಭಟನೆಗಳಿಗಿಂತ ಹೆಚ್ಚು ಸೌಮ್ಯತೆಯನ್ನು ತೋರಿದ್ದಾರೆ. ಅವರ 'ನನ್ನ ಕವನ' ಕವಿತೆಯನ್ನು ನೋಡಿದಾಗ ಅಲ್ಲಿನ ಕವನದ ವಸ್ತು 'ಬಡವರ ಮಗಳು, ಕುರಿಕಾಯುವ ಕುರುಬ, ಹೆಣ್ಣಿನ ಕಣ್ಣೀರು, ನಕ್ಷತ್ರ, ಗುಲಾಬಿಹೂವು, ಎಲ್ಲವೂ ಒಂದರೊಳಗೊಂದು ಮಿಳಿತಗೊಂಡಿದ್ದು ಅವುಗಳೆಲ್ಲವೂ ಕವಿಯನ್ನು ಕ್ರಾಂತಿಯ ಚಿಂತನೆಯ ಕಡೆಯಿಂದ ಮುಗ್ಧತೆಯ ಮನಸ್ಸಿನ ಕಡೆಗೆ ಕೊಂಡೊಯ್ಯುವಂತಹ ವಸ್ತುವನ್ನು ಒಳಗೊಂಡಿದೆ.'[೬] ಅವರ 'ಬೆಂಗಳೂರಿನ ಹಾಡು' ಕವಿತೆಯು ಬೆಂಗಳೂರಿನಲ್ಲಿ ವಾಸವಾಗಿರುವ ನಿರಾಶ್ರಿತರ ನಿಕೃಷ್ಟ ಬದುಕು ಮತ್ತು ಅವರ ಅಂತರಾಳದಲ್ಲಿ ಮನೆ ಮಾಡಿಕೊಂಡಿರುವ ನೋವುಗಳು, ಅವರ ಯಾತನೆಯ ಬದುಕಿನ ಚಿತ್ರಣ ಈ ಕವನದ ವಸ್ತುವಾಗಿದೆ.

ಕವಿಯು 'ಸುಟ್ಟಾವು ಬೆಳ್ಳಿ ಕಿರಣ' ಕವನವನ್ನು ಬರೆಯುವಾಗ ಕ್ರಾಂತಿ ಚಿಂತನೆಯ ಕಡೆಯಿಂದ ಪ್ರೀತಿ, ಪ್ರೇಮ, ವಿಶ್ವಾಸದೆಡೆಗೆ ತನ್ನ ಬರವಣಿಗೆಯನ್ನು ಸಾಗಿಸಿದ್ದಾರೆ. ಪ್ರೀತಿ, ಪ್ರೇಮ, ವಿರಹಗಳೇ ಈ ಕವನದಲ್ಲಿ ಮೂಡಿರುವ ಮುಖ್ಯ ವಸ್ತುವಾಗಿದೆ. 'ರಾಣಿ ಪ್ರೇಮ' ಕವಿತೆಯಲ್ಲಿ ಜೀತಗಾರಿಕೆಯವನನ್ನು ರಾಣಿಯು ಪ್ರೀತಿಸುವ ಮತ್ತು ಅಂತಿಮವಾಗಿ ಸಾವನ್ನು ಹೊಂದುವ ವಸ್ತುವನ್ನೊಳಗೊಂಡಿದೆ. ಇಲ್ಲಿ ಉತ್ತರ ದಿಕ್ಕಿಗೆ ರಾಣಿ ಇದ್ದಳು ಎಂಬುದು ದೆಹಲಿಯಲ್ಲಿ ಆಳ್ವಿಕೆ ಮಾಡುತ್ತಿದ್ದ ಪ್ರಧಾನಿ ಇಂದಿರಾಗಾಂಧಿಯವರನ್ನು ಸೂಚಕದ ವಸ್ತುವಾಗಿಟ್ಟುಕೊಂಡು ಆ ಕಾಲಘಟ್ಟಕ್ಕೆ ಬರೆದಂತಹ ಕವನವಾಗಿದೆ.

'ದೋಣಿಯ ಹಾಡು' ಕವಿತೆಯಲ್ಲಿ ಕವಿಯು ವ್ಯವಸ್ಥೆಯನ್ನು ಪ್ರಶ್ನಿಸಲು ಹೊರಟಿರುವಂತಹ ಒಬ್ಬ ನಾಯಕನ ಜೀವನ ಪರಿಸ್ಥಿತಿಯೇ ಹಾಡಿನ ರೂಪಕ್ಕಿಳಿದಿರುವುದನ್ನು ಕಾಣಬಹುದು.[2] ಅಂದರೆ ಇದುವರೆಗೂ ಸಮಾಜದಲ್ಲಿದ್ದಂತಹ ಅಂಧಕಾರದ ವ್ಯವಸ್ಥೆ'ಯನ್ನು ಕವಿ ತನ್ನ ಕಾವ್ಯದ ವಸ್ತುವಾಗಿಸಿಕೊಂಡಿದ್ದಾರೆ. ಅಂದರೆ ಸಾಮಾಜಿಕ ಸ್ಥರಗಳಲ್ಲಿ ಬೆಂದುಹೋದ ಆಸೆಗಳ ನೋವಿನ ಆಳದ ಧ್ವನಿ ಈ ಕವನದಲ್ಲಿ ವ್ಯಕ್ತಗೊಂಡಿದೆ.

ಕವಿಯ 'ನಿನ್ನ ಕಣ್ಣಿನ ಮಾತು', ಕೋರಿಕೆ, ಕವನಗಳಲ್ಲಿ ಒಲವು ಪ್ರೀತಿ, ನೋವಿನ ಒಳಗೆಯೇ ಗುಲಾಬಿ ಎಸಳಿನ ಕಂಪನ್ನು ಸೂಸುವಿಕೆ, ಬಣ್ಣ ಬಣ್ಣದ ಬದುಕಿನ ಕನಸುಗಳ ಅರಳುವಿಕೆ ಎಲ್ಲವೂ ಅಭಿವ್ಯಕ್ತಗೊಂಡಿವೆ ಕವಿ ತನ್ನ ಕನಸಿನ ಪ್ರೀತಿಯ ಬಗೆಗಿನ ವಿಷಾದವನ್ನು ವ್ಯಕ್ತಪಡಿಸುತ್ತಿದ್ದಾನೆ. ಪ್ರೀತಿಯ ಮಧ್ಯದಲ್ಲಿ ಸುಳಿಯುತ್ತಿರುವ ಜಾತಿ ಪದ್ಧತಿ, ಅದರಿಂದ ಪ್ರೀತಿಯು ಭೂತದ ಗೋರಿಯೊಳಗೆ ಮರೆಯಾಗಿ ವಿಷಾದದ ಛಾಯೆ ಮೂಡುತ್ತಿರುವುದು 'ನಿನ್ನ ಕಣ್ಣಿನ ಮಾತು' ಕವನದ ವಸ್ತುವಾಗಿದೆ.

'ನಲವತ್ತೇಳರ ಸ್ವಾತಂತ್ರ್ಯ' ಕವಿತೆಯು ಬಡವರು ನಿಜವಾಗಿಯೂ ಬಡವರಾಗಿಯೇ ಇದ್ದಾರೆ. ಶ್ರೀಮಂತರು ಮತ್ತು ರಾಜಕಾರಣಿಗಳು ದರ್ಪದಿಂದ ಬದುಕುತ್ತಿದ್ದಾರೆ. ಸುಮಾರು ನಾಲ್ಕು ದಶಕಗಳು ಕಳೆದರೂ (ಕವಿಯ ಬರಹದ ಕಾಲಕ್ಕೆ) ಜಾತಿ ವ್ಯವಸ್ಥೆ ಹೋಗಿಲ್ಲ ಪೋಲೀಸರು ಬಡವರ ಮೇಲೆ ದಬ್ಬಾಳಿಕೆ ನಡೆಸಿದ್ದಾರೆ. ಶ್ರೀಮಂತರ ಅಡಿಯಾಳುಗಳಾಗಿ ಕೂಲಿ ಕಾರ್ಮಿಕರು ದುಡಿಯುತ್ತಿದ್ದಾರೆ. ಸಮಾಜದೊಳಗೆ ಉಸಿರುಗಟ್ಟಿದ ವ್ಯವಸ್ಥೆ

ನಿರ್ಮಾಣಗೊಂಡಿದೆ. ಹೀಗಿರುವಾಗ ದೇಶಕ್ಕೆ ಸ್ವಾತಂತ್ರ್ಯವೆಂಬುದು ಯಾರಿಗೆ ಬಂದಿದೆ ಎಂಬುದು ಕವಿಯ ಮುಖ್ಯ ಪ್ರಶ್ನೆಯಾಗಿದೆ. ಹಾಗೆಯೇ 'ತಬರನ ಹಾಡು' ಕವಿತೆಯಲ್ಲಿಯೂ ಸಹ ಅಧಿಕಾರದ ಮದ, ಬಡವರ ರೋಧನೆ, ರಾಜಕಾರಣಿಗಳ ಪೊಳ್ಳುಭಾಷಣಗಳು ಸ್ವಾತಂತ್ರ್ಯವೆಂಬುದು ಉಳ್ಳವರಿಗೆ ಮಾತ್ರವಾಗಿದೆ. ತಬರನಂತಹ ಬಡವನಿಗೆ ಮೂಲ ಸವಲತ್ತು ಸಿಗದಂತಹ ಸ್ವಾತಂತ್ರ್ಯದ ನಾಡಾಗಿದೆ. ಅಂತಹ ನಾಡಿನ ಬಗ್ಗೆ ಬಂಡೇಳಬೇಕು ಎಂಬುದು ಈ ಕವನದಲ್ಲಿನ ವಿಷಯವಾಗಿದೆ.

ದಾರಿ ಯಾವುದೋ ಎಂಬುದರಲ್ಲಿ ಬಿಡುಗಡೆಯನ್ನು ಬಯಸುವ, ಅಂಧಕಾರದಲ್ಲಿ ಬದುಕುತ್ತಿರುವವರಿಗೆ ಬೆಳಕಿನ ದಾರಿಯನ್ನು ತೋರಿಸುವ, ಅವಮಾನದಿಂದ ಕಣ್ಣೀರು ಸುರಿಸುವವರಿಗೆ ಕಣ್ಣೀರೊರೆಸುವ ಕೈಗಳು ಮೇಲೇಳುವಂತಹ ದಾರಿ ಯಾವುದು ಎಂಬ ಪ್ರಶ್ನೆಯನ್ನೊಳಗೊಂಡಿದೆ. ಹಾಗೆಯೇ ಬಡವರಿಗೆ ಬಿಡುಗಡೆಯ ಬದುಕನ್ನು ತೋರುವುದರ ಜೊತೆಗೆ ಬಡಜನರ ಬದುಕಿನಲ್ಲಿ ಚೆಲ್ಲಾಟವಾಡುತ್ತಿರುವ ರಾಜಕಾರಣಿಗಳ ಹುಚ್ಚಾಟವನ್ನು ಅವರ ಅಟ್ಟಹಾಸವನ್ನು ಮೆಟ್ಟಿ ನಿಲ್ಲುವ ನೊಂದವರ ಧ್ವನಿಯನ್ನು ಕಾವ್ಯದ ವಸ್ತುವಾಗಿಸಿಕೊಂಡು 'ಸಂಪಿಗೆಯ ಮರದಲ್ಲಿ' ಕವನವನ್ನು ಕವಿ ಬರೆದಿದ್ದಾರೆ.

'ಕೊಳೆಗೇರಿಯ ಹಾಡು' ಕವನದ ವಸ್ತುವೇ ಒಂದು ರೀತಿಯಲ್ಲಿ ವಿಷಾದದ ಸಂಗತಿ. ಕೇವಲ ಓಟಿನ ಸಂದರ್ಭದಲ್ಲಿ ಮಾತ್ರ ಬಡವರನ್ನು ತಿರುಗಿನೋಡುವ ರಾಜಕೀಯ ಪುಡಾರಿಗಳನ್ನು, ಬಡಪರ ಬದುಕಿನ ನೋವಿನ ಕತೆಯನ್ನು ಈ ಕವನದಲ್ಲಿ ಮುಖ್ಯ ವಸ್ತುವಾಗಿಸಿಕೊಂಡಿದ್ದಾರೆ. ಹಾಗೆಯೇ 'ಗುಡಿಗೆ ಹೋಗುವವರ ಹಾಡು' ಅಜ್ಜಿಯ ಹಾಡು' ' ಹೆಂಡಕ್ಕೆ ಸಾವಿಲ್ಲವೋ' 'ನೆನಪು' ಕವನಗಳಲ್ಲಿಯೂ ಮುಖ್ಯವಾಗಿ ಕವಿಯು ದಲಿತರ ಬದುಕಿನ ಸ್ಥಿತಿಯನ್ನು ಅವರು ಗುಲಾಮಗಿರಿಯ ಸಂಕೋಲೆಯಲ್ಲಿ ಬದುಕುತ್ತಿದ್ದು ಅವರ ಬಿಡುಗಡೆಯನ್ನು ಕುರಿತ ವಸ್ತುವನ್ನೊಳಗೊಂಡಿದ್ದು 'ಅಜ್ಜಿಯ ಹಾಡು' ಕವನದಲ್ಲಿ ಸಂಕಪ್ಪಯ್ಯನ ತಾಯಿ ಚೋಮನಿಗೆ ಭೂಮಿ ಕೊಡಲು ನಿರಾಕರಿಸುವ ವಸ್ತುವನ್ನು, ಹೊಲೆಯ ಜಾತಿಗೆ ಸೇರಿದವರು ಭೂ ಹೊಡೆಯರಾಗಲು ಸಾಧ್ಯವಿಲ್ಲ ಎಂಬ ಸಂದೇಶವನ್ನು ಸಾರುವ ಪರಿಯನ್ನು ಈ ಕವನದ ವಸ್ತುವಾಗಿಸಿಕೊಳ್ಳಲಾಗಿದೆ.

ಕವಿಯ ಮೂರು ಕವನ ಸಂಕನಲದಲ್ಲಿ ಅಡಕಗೊಂಡಿರುವ ಮುಖ್ಯ ವಸ್ತುವನ್ನು ಚರ್ಚಿಸಲಾಗಿದೆ. ಕವಿಯು ತನ್ನ ಮೊದಲ ಕವನ ಸಂಕಲನವಾದ 'ಹೊಲೆಮಾದಿಗರ ಹಾಡು' ಕವನ ಸಂಕಲನದಲ್ಲಿ ದಲಿತರ ಅದರಲ್ಲೂ ಹೊಲೆಮಾದಿಗರ ಬದುಕಿನ ಪರಿಸ್ಥಿತಿಯನ್ನು ಕಾವ್ಯದ ವಸ್ತುವಾಗಿಸಿಕೊಂಡು, ಸಾಮಾಜಿಕ ಅಸಮಾನತೆಯ ವಿರುದ್ಧ ಪ್ರತಿಭಟಿಸಲು ಎಲ್ಲರನ್ನು ಸಜ್ಜುಗೊಳಿಸುವ ಕಾರ್ಯ ಮಾಡಿದ್ದಾರೆ. ಆದರೆ ತಮ್ಮ ಎರಡನೇ ಕವನ ಸಂಕಲನದಲ್ಲಿ ಸಾಮಾಜಿಕ ವ್ಯವಸ್ತೆಯ ಕಡೆಗೆ ಮುಖ ಮಾಡಿ ನಿಂತ ಕವಿ ಹೊಲೆಮಾದಿಗರ ಜೊತೆಗೆ ಇತರೆ ಜಾತಿಗಳ ಬಡಜನರ ರೈತರ, ಕೂಲಿ ಕಾರ್ಮಿಕರ ಬದುಕನ್ನು ವಸ್ತುವಾಗಿಸಿಕೊಂಡಿದ್ದಾರೆ. ಅಂಧಕಾರ, ಅವೈಜ್ಞಾನಿಕ ಪದ್ಧತಿಗಳು ರಾಜಕಾರಣಿಗಳ ಪೊಳ್ಳು ಭಾಷಣಗಳನ್ನು ಪ್ರಶ್ನಿಸುವಂತಹ ವಸ್ತುವನ್ನು ತಮ್ಮ ಕವನದಲ್ಲಿ ಕಟ್ಟಿಕೊಟ್ಟಿದ್ದಾರೆ. ಜೊತೆಗೆ ಹೆಣ್ಣಿನ ಅಸಹಾಯಕ ಸ್ಥಿತಿ, ಅವಳ ಮೇಲೆ ನಡೆಯುತ್ತಿರುವ ಲೈಂಗಿಕ ಮತ್ತು ಸಾಮಾಜಿಕ ಆಕ್ರಮಣಗಳು ಕವಿಯ ಕವನದ ವಿಷಯವಾಗಿದೆ. ತಮ್ಮ ಮೂರನೇ ಕವನ ಸಂಕಲನದಲ್ಲಿ ನಿರಾಶೆ, ವಿಷಾದದ ಜೊತೆಗೆ ತನ್ನ ಮನಸ್ಸಿನ ಮಾಗುವಿಕೆಯಿಂದ ಪ್ರೀತಿ, ಪ್ರೇಮ, ವಿರಹ ನೋವು ಎಲ್ಲವನ್ನೂ ತನ್ನ ಕಾವ್ಯದ ವಸ್ತುವಾಗಿಸಿಕೊಂಡಿದ್ದಾರೆ. ಜೊತೆಗೆ ಕಾರ್ಮಿಕರು, ದಲಿತರು, ಅಸಹಾಯಕರ ಮೇಲೆ ನಡೆಯುತ್ತಿರುವ ನಿರಂತರ ದೌರ್ಜನ್ಯ ದಬ್ಬಾಳಿಕೆಗಳು ಅವುಗಳನ್ನು ಪ್ರತಿರೋಧಿಸುತ್ತಾ ನಿಲ್ಲುವ ಪರಿಸ್ಥಿತಿಯನ್ನು ವಸ್ತುವಾಗಿಸಿಕೊಂಡಿದ್ದಾರೆ.

**೨. ಡಾ. ಸಿದ್ಧಲಿಂಗಯ್ಯನವರ ಕಾವ್ಯದಲ್ಲಿರುವ ರೂಪಕ-ಪ್ರತಿಮೆ-ಸಂಕೇತಗಳು**

ಕವಿ ಡಾ. ಸಿದ್ಧಲಿಂಗಯ್ಯನವರ ಬರವಣಿಗೆಯ ಕಾಲವು ಕೋಮುದಳ್ಳುರಿಗೆ ಸಿಲುಕಿ ಒಬ್ಬರು ಮತ್ತೊಬ್ಬರನ್ನು ಹಿಂಸಿಸುವ ಮತ್ತು ಒಬ್ಬರು ಮತ್ತೊಬ್ಬರ ಮೇಲೆ ಜಾತಿಯ ಶ್ರೇಷ್ಠತೆಯ ಹೆಸರಿನಲ್ಲಿ ಸವಾರಿ ಮಾಡುವಂತಹ ಕಾಲವಾಗಿತ್ತು. ಅಂತಹ ಪರಿಸ್ಥಿತಿಯಲ್ಲಿ ಮೇಲು ಜಾತಿಗಳ ಶೋಷಣೆಗೆ ಒಳಗಾಗಿ ಅವರಿಂದ ಅಪಮಾನಗೊಂಡು ಹಂದಿನಾಯಿ ಗಳಿಗಿಂತಲೂ ಹೆಚ್ಚಾಗಿ ಕಡೆಗಣಿಸಲ್ಪಟ್ಟ ಜನಾಂಗದ ಬದುಕನ್ನು ಅನಾವರಣಗೊಳಿಸುವ ಸಲುವಾಗಿಯೇ ದಲಿತ ಸಾಹಿತ್ಯದಂತಹ ಒಂದು ಬರವಣಿಗೆ ಬೇಕಾಗಿತ್ತು.

ಬರಹಗಾರನ ಈ ಅಗತ್ಯತೆಗಳು ಇಡೀ ದಲಿತರ, ಕಾರ್ಮಿಕರ, ರೈತವರ್ಗದವರ, ಅಸಮಾನತೆಗೊಳಗಾಗಿ ತುಂಬ ನೋವುಂಡವರ ಬದುಕನ್ನು ನೇರವಾಗಿ ಪ್ರತಿಭಟಿಸುವ

ಮತ್ತು ಅನಾವರಣಗೊಳಿಸುವ ಅಗತ್ಯವಿತ್ತೇ ಹೊರತು, ಅವುಗಳನ್ನು ರೂಪಕ ಪ್ರತಿಮೆ, ಸಂಕೇತಗಳ ಮೂಲಕ ಹೇಳುವುದಾಗಿರಲಿಲ್ಲ. ಬರಹಗಾರನಿಗೆ ಮುಖ್ಯವಾಗಿ ಇರುವ ಉದ್ದೇಶವೆಂದರೆ ವ್ಯವಸ್ಥೆಯನ್ನು ನೇರವಾಗಿ ಪ್ರಶ್ನಿಸಿ ಅದರ ಪರಿವರ್ತನೆಯನ್ನು ಬಯಸುವುದಾಗಿತ್ತು. ಹಾಗಾಗಿ ಆತನಿಗೆ ರೂಪಕ, ಉಪಮೆ, ಪ್ರತಿಮೆ ಸಂಕೇತಗಳನ್ನು ಬಳಸಿ ಜನರನ್ನು ರಂಜಿಸುವ ಅಗತ್ಯತೆ ಇರಲಿಲ್ಲ. ನೇರವಾಗಿ ಸಮಾಜದ ಸಮಸ್ಯೆಗಳೇನು? ಅವುಗಳನ್ನು ಸರಿದೂಗಿಸಿಕೊಳ್ಳಲು ಸಾಮಾನ್ಯ ಜನರು ಮಾಡಬೇಕಾದಂತಹ ಮಾರ್ಪಾಡುಗಳೇನು? ಎಂಬುದನ್ನು ಅರ್ಥೈಸುವಂತಹ ಮನೋಭಾವಗಳುಳ್ಳ ಕಾವ್ಯವಾಗಿದ್ದವೇ ಹೊರತು ಜನರನ್ನು ರಂಜಿಸುವ ಕಾವ್ಯಗಳಾಗಿ ರೂಪುಗೊಳ್ಳಲಿಲ್ಲ.

ಹೀಗಿದ್ದರೂ ಕವಿಯು ಕೆಲವ ಕಡೆ ದಲಿತರ ನೋವು, ಅವರ ಬದುಕಿನ ಶೈಲಿ, ಅವರ ಸಾಮಾಜಿಕ ಪರಿಸ್ಥಿತಿ, ಅವರ ಆಹಾರ ಪದ್ಧತಿ, ರಾಜಕೀಯ ವ್ಯವಸ್ಥೆಯಿಂದ ವಂಚಿತರಾಗಿರುವ ಸ್ಥಿತಿ, ಇವುಗಳೆಲ್ಲದರ ವಿರುದ್ಧ ಅವರು ಬಂಡೇಳುವ, ಪ್ರತಿಭಟಿಸುವ ತಮ್ಮ ಸಿಟ್ಟು, ಆಕ್ರೋಶಗಳನ್ನು ವ್ಯಕ್ತಪಡಿಸುವುದರ ಸಂಕೇತಗಳನ್ನು ಕೆಲವು ಕವನಗಳಲ್ಲಿ ಪ್ರತಿಮೆಗಳಾಗಿ, ರೂಪಕಗಳಾಗಿ ಬಳಸಿರುವುದನ್ನು ಗಮನಿಸಬಹುದಾಗಿದೆ. 'ಹೊಲೆಮಾದಿಗರ ಹಾಡು' ಶೀರ್ಷಿಕೆಯೇ ಒಂದು ರೀತಿಯಲ್ಲಿ ಅಸಮಾನತೆಗೊಳಗಾದ, ನೋವುಂಡವರ ಜೀವನದ ಕೊರಗನ್ನು ಸೂಚಿಸುವುದರ ಸಂಕೇತವೆಂಬಂತೆ ಗೋಚರಿಸುತ್ತದೆ. ಇವರ ಕಾವ್ಯದಲ್ಲಿ ನೇರವಾದ ಭಾಷೆಯ ಬಳಕೆಯಾಗಿದ್ದರೂ ನೊಂದವರಲ್ಲಿ, ಶೋಷಣೆಗೊಳಗಾದವರಲ್ಲಿ ಕ್ರಾಂತಿಯ ಕಿಡಿಯನ್ನು ಹಚ್ಚುವ 'ಬೆಂಕಿ ಉಂಡೆಯಂತೆ' ರಚಿತವಾಗಿರುವ ಕಾವ್ಯದಲ್ಲಿ ಬಳಸಿರುವ ಕೆಲವು ರೂಪಕ, ಪ್ರತಿಮೆ ಮತ್ತು ಸಂಕೇತಗಳನ್ನು ಕಾಣಬಹುದು.

ಇಕ್ರಲಾ ವದೀರ್ಲಾ<br>
ಈ ನನ್‌ಮಕ್ಕಳ ಚರ್ಮ ಎಬ್ರಲಾ (ಒಂದು ಪದ)

ಸುಮಾರು ೭೦ರ ದಶಕದಲ್ಲಿ ಬಂದಂತಹ ಈ ಕಾವ್ಯದ ಶೈಲಿ ಇದುವರೆವಿಗೂ ಸಿದ್ಧಮಾದರಿಯಂತೆ ರೂಪುಗೊಂಡು ರಾರಾಜಿಸುತ್ತಿದ್ದಂತಹ ಕಾವ್ಯ ಶೈಲಿಗಿಂತ ಭಿನ್ನವಾಗತೊಡಗಿತು. ಯಾರು ಸಮಾಜದಲ್ಲಿ ನಿಕೃಷ್ಟವಾಗಿ ಬದುಕುತ್ತಿದ್ದು ನೋವುಗಳು ಮತ್ತು ಅಪಮಾನಗಳನ್ನೇ ಹಾಸುಂಡು ಬದುಕುತ್ತಿದ್ದರೋ ಅವರನ್ನು ಕೇಂದ್ರವಾಗಿರಿಸಿ ಕೊಂಡಿತು. ಈ ಕಾವ್ಯವು ಸಿಟ್ಟು, ಹಿಂಸೆ, ದ್ವೇಷದ ಪ್ರಭಾವವೇ ಹೊರತು ಬೇರೇನಲ್ಲ.

ಇಕ್ರಲಾ ವದೀರ್ಲಾ ಎಂಬ  ನುಡಿಗಟ್ಟು ಕಾವ್ಯದ ಧ್ವನಿಯೇ ಹೊರತು ದ್ವೇಷದ ಹಗೆಯಲ್ಲಿ ಆನಾದಿಕಾಲದ   ಭಾದೆಯಒಂದು ಉಚ್ವಾಸವೇ ಹೊರತು ಅಸೂಯೆ  ಅಲ್ಲ. ಇದು ಹತಾಶೆಯ ಕೊನೆ ತುದಿಯಲ್ಲಿ ನಿಂತಿರುವ ಜನರ ಆಕ್ರಂದನದ ಕೂಗಿನ ಒಂದು ರೂಪಕ.[೮]

ಗುಡಿಸಲುಗಳು ಗುಡುಗುತಿವೆ ಬಂಗಲೆಗಳು ನಡುಗುತಿದೆ
ಎಲ್ಲೆಲ್ಲೂ ಮೊಳಗುತ್ತಿದೆ ನವಕ್ರಾಂತಿಯ ಗಾನ (ಕ್ರಾಂತಿಪದ)

ಎನ್ನುವ ಕವಿಯ ಬರವಣಿಗೆಯ ಸಾಲುಗಳು ಕ್ರಾಂತಿಕಾರಿ ಮನೋಭಾವದಿಂದ ಕೂಡಿದ್ದರೂ ಸಹ ಸಮಾಜದಲ್ಲಿ ನೋವು, ಕಷ್ಟ, ದುಃಖ ಎಲ್ಲವನ್ನು ಅನುಭವಿಸಿದಂತಹ ದೀನದಲಿತರು ತಮ್ಮ ಸಿಟ್ಟು ಆಕ್ರೋಶಗಳನ್ನು ವ್ಯಕ್ತಪಡಿಸುವುದರ ಸಂಕೇತವಾಗಿಯೂ, ಇದುವರೆವಿಗೂ ಬಡವರ ಬದುಕಿನೊಡನೆ ಚೆಲ್ಲಾಟವಾಡುತ್ತಿದ್ದ ಮಾಲೀಕರು ಐಷಾರಾಮಿ ಜೀವನ ನಡೆಸುತ್ತಿದ್ದರು. ಗುಡಿಸಲುಗಳು ಅಂದರೆ ಬಡತನದ ಕರಿನೆರಳಲ್ಲಿ ಬದುಕಿದ್ದ ಜನರು ಶ್ರೀಮಂತರ ಮೇಲುವರ್ಗದವರ ವಿರುದ್ಧ ಬಂಡೆದ್ದಾಗ ಅವರ ಗುಂಡಿಗೆಗಳೆಲ್ಲವೂ ಅದುರಿದವು. ಅದರ ಸಂಕೇತವಾಗಿ ಬಂಗಲೆಗಳು ನಡುಗುತ್ತಿವೆ ಎಂದು ಬಳಸಲಾಗಿದೆ. ಅಂದರೆ ಬಡವರ ಪ್ರತಿಭಟನೆಯಿಂದ ಶ್ರೀಮಂತರು ಹೆದರಿ ನಡುಗುವ ಪರಿಸ್ಥಿತಿ ನಿರ್ಮಾಣಗೊಳ್ಳುತ್ತಿದೆ ಎಂಬುದರ ಸಂಕೇತವಾಗಿ ತೋರಲಾಗಿದೆ.

ತೊಟ್ಟಿಕ್ಕಿದ ಬೆವರ ಹನಿ
ಬೆಂಕಿಯಾಗಿ ಸಿಡಿದು (ಕ್ರಾಂತಿಪದ)

ಇದುವರೆವಿಗೂ ಗುಲಾಮರಾಗಿ ಜೀತದಾಳುಗಳಾಗಿ ಸೂರ್ಯನಿಗೆ ಉರಿ ಬಿಸಿಲಿನಲ್ಲಿ ಮೈಯೊಡ್ಡಿ ದುಡಿಯುತ್ತಿದ್ದ ನೇಗಿಲ ನೊಗವನ್ನು ಹೆಗಲಮೇಲಿಟ್ಟು ಭೂಮಿ ಉಳುಮೆ ಮಾಡಿ ಬೆವರ ಹನಿ ಸುರಿಸುತ್ತಿದ್ದ ದಲಿತರ ಮೈಯ ಬೆವರ ಹನಿಗಳೇ ಬೆಂಕಿಯಾಗಿ ಸಿಡಿದು ಇಡೀ ದಲಿತ ಸಮುದಾಯ ಭೂ ಮಾಲೀಕರ ವಿರುದ್ಧ ಸಿಡಿದು ನಿಲ್ಲುವುದರ ಪ್ರತಿಮೆಯಾಗಿ ಕಾಣಬಹುದಾಗಿದೆ.

ನನ್‌ಮಥ್ಯಾಗಿನ ಬಾಡ ಇಸ್ಪಿಸ್ಟೇ ಕಿತ್
ತಿನ್‌ಬ್ಯಾಡಿ ನಾ ಜೀಮೂತವಾಹನ ಅಲ್ಲ
ಏ ಗಲ್ಡಗಳಾ

ನನ್‌ಜ್ಯುಟ್ ಕಚ್ಕಂಡ್ ಮ್ಯಾಲ್ಕಾರಿ
ಎಲ್ಲಾನ ಕೆಂಪಟ್ಟೆ ಕೆಂಪ್ ನ್ಯಲ್ದಡೆ ನನ್ನಸುದ್ಬುಡಿ
ನಾ ಬದಿಕತ್ತಿನಿ ಸರಿಯಾಗುಸ್ರಾಡ್ತೀನಿ

ಬರಹಗಾರನು ಆ ಕಾಲಘಟ್ಟದ ಬಿಡುಗಡೆಯ ಸ್ವರೂಪದಂತಿದ್ದ ಕಮ್ಯುನಿಷ್ಟಿನ ಸಿದ್ಧಾಂತಗಳಿಗೆ ಮಾರುಹೋಗಿದ್ದ ಕಾರಣದಿಂದಲೂ ಡಾ. ಅಂಬೇಡ್ಕರ್‌ರವರ ವಿಚಾರಧಾರೆಗಳಿಂದ ಪ್ರಭಾವಗೊಂಡಿದ್ದರಿಂದ ದೇಶದ ಮೂಲೆ ಮೂಲೆಗಳಲ್ಲೂ ಅಸಮಾನತೆಯ ವಿರುದ್ಧ ಕ್ರಾಂತಿಯಿಂದ ಕೂಡಿದ್ದಂತಹ ಪ್ರತಿಭಟನೆಗಳು ನಡೆಯುತ್ತಿದ್ದವು. ಇದೇ ಕ್ರಾಂತಿಕಾರಿ ಮನೋಭಾವ ಹೊಂದಿದ್ದ ಬರಹಗಾರ ತನ್ನ ಬರವಣಿಗೆಯಲ್ಲಿ ದಲಿತರನ್ನು ಕಿತ್ತು ತಿನ್ನುತ್ತಿದ್ದ ಯಾಜಮಾನ್ಯ ವ್ಯವಸ್ಥೆಯನ್ನು ಪ್ರಶ್ನಿಸುತ್ತಾ, ಬಿಡುಗಡೆಯ ದಾರಿ ತೋರಿಸುವುದರ ಸಂಕೇತವಾಗಿ 'ನನ್ನ ಕಚ್ಕಂಡ್ ಕೆಂಪ್ ನೆಲದಾಗ ಬಿಡಿ' ಎಂಬುದು ಕ್ರಾಂತಿಯ ಸಂಕೇತವಾಗಿಯೂ, ನಾನು ಸರಿಯಾಗಿ ಉಸಿರಾಡುತ್ತೇನೆ ಎಂಬುದು, ಉಸಿರುಗಟ್ಟಿ ಬದುಕುತ್ತಿರುವ ಸಮಾಜದಿಂದ ತನ್ನನ್ನು ತಾನು ಬಿಡುಗಡೆಗೊಳಿಸಿಕೊಂಡು ಸಮತಾ ಸಮಾಜದ ಕಡೆಗೆ ಮುಖ ಮಾಡಿ ನಿಂತಿರುವುದರ ಸಂಕೇತವಾಗಿದೆ.

ಇಡೀ ರಾಜಕೀಯ ವ್ಯವಸ್ಥೆಯಲ್ಲಿ ರಾಜಕಾರಣಿಗಳು ಕೇವಲ ಶ್ರೀಮಂತ ವರ್ಗದವರಿಗೆ ಮಾತ್ರ ಸಹಕಾರಿಗಳಾಗಿ ಬದುಕುತ್ತಿರುವ ಸ್ಥಿತಿಯನ್ನು ಕವಿ ಇಲ್ಲಿ ರೂಪಕವಾಗಿ ನೀಡಿದ್ದಾರೆ.

ದ್ವಡ್ವ ಭಕ್ತರಿಗೆ ಚಿನ್ನ ಕೊಟ್ಟೋನು
ದಡ್ಡ ಭಕ್ತರಿಗೆ ಬೂದಿ
ಇವನು ಮಾಡುವನು ಬಿದ್ದೋರ ಉದ್ಧಾರ
ಕಾಯಿರಪ್ಪ ಕಾಯ್ರಿ (ಮಹಾವ್ಯಕ್ತಿ ಒಬ್ಬ)

ರಾಜಕಾರಣಿಗಳ ಭಾಷಣದ ಪರಿಯನ್ನು ಕವಿಯು ವ್ಯಂಗ್ಯತೆಯ ಮೂಲಕ ತೋರಿಸಿಕೊಡಲು ಪ್ರಯತ್ನಿಸುತ್ತಾರೆ. ರಾಜಕಾರಣಿಗಳು ಹೇಳುವುದು ಒಂದಾದರೆ ಮಾಡುವುದು ಬೇರೆಯದೇ ಆಗಿದೆ. ಆಶ್ವಾಸನೆಗಳನ್ನು ಬಡವರ ಮುಂದೆ ಹೇಳುತ್ತಾರೆ. ಆದರೆ ಸವಲತ್ತುಗಳನ್ನೆಲ್ಲ ಶ್ರೀಮಂತರಿಗೆ ನೀಡುತ್ತಾರೆ. ನಾವು ಇನ್ನು ಅವರನ್ನು ಅರಿಯದೆ

ದಡ್ಡರಾಗಿರುವುದರಿಂದ ನಮಗೆ ಬೂದಿಯನ್ನೇ ತಿನ್ನುವಂತೆ ಮಾಡಿದ್ದಾರೆ. ಅವರು ನಿಜವಾಗಿಯೂ ನಮ್ಮ ಉದಗ್ಧಾರಕರಲ್ಲ. ನೀವು ಕಾಯುತ್ತಿರುವುದು ಸರಿಯೂ ಅಲ್ಲ ಎಂಬುದನ್ನು ವಿಡಂಬನೆ, ವ್ಯಂಗ್ಯತೆಯ ಮೂಲಕ ಜನರಿಗೆ ತಿಳಿಹೇಳಿದ್ದಾರೆ. ಭಾರತ ಮಾತೆಗೆ ಸಿಗುತ್ತಿರುವ ಗೌರವ ಮರ್ಯಾದೆಗಳನ್ನು ಕವಿಯು ವ್ಯಂಗ್ಯವಾಗಿ ಸಂಕೇತಿಸುತ್ತಿರುವುದನ್ನು ನಾವು ಅವರ 'ಕನ್ನಡವ್ವನಿಗೆ' ಕವಿತೆಯ ಮೂಲಕ ತಿಳಿಯಬಹುದು.

ರೈತರ ಬೆವರ ನೆಕ್ಕಿ ನೆಕ್ಕೊದಿದ
ಜಮೀನುದಾರರ ಜೊತೆಗಾತಿ
ಕಾರ್ಮಿಕರ ರಕ್ತದ ರವೆವುಂಡೆಯ ಉಂಡು ಕಾರಿನ
ಹಾರನ್ನಿನಂತೆ ತೇಗುವ ಮಾಲೀಕರ ಮಿಂಡಗಾತಿ (ಕನ್ನಡವ್ವನಿಗೆ)

ಪದ್ಯದ ಈ ಸಾಲುಗಳು ರೈತರ ಬೆವರಿಗೆ ಈ ನಾಡಿನಲ್ಲಿ ಸರಿಯಾಗಿ ಮಾನ್ಯತೆ ಸಿಗದಿರುವುದಾಗಿದೆ. ಇಡೀ ನಾಡೇ ಜಮೀನುದಾರರ ಕೈಗೊಂಬೆಯಾಗಿದ್ದು ಕಾರ್ಮಿಕರು ದುಡಿಯುವ ದುಡಿಮೆಗೆ ಪ್ರತಿಫಲವಿಲ್ಲದಂತಾಗಿದೆ. ಮತ್ತು ಕಾರ್ಮಿಕರಲ್ಲಿ ಪುಟಿಯುತ್ತಿದ್ದಂತಹ ಕ್ರಾಂತಿಕಾರಿ ಚಿಂತನೆಗಳನ್ನು ಅವರ ಅಂತರಾಳದಲ್ಲೇ ಅಡಗಿಸಿಕೊಂಡು ಬದುಕುವಂತೆಯೂ ನಾಡಿನ ಇಡೀ ರಾಜಕೀಯ ವ್ಯವಸ್ಥೆಯೇ ಜಮೀನುದಾರರ ಮಾಲೀಕರ ಮೇಲುವರ್ಗದವರ ಕೈಗೊಂಬೆಯಾಗಿರುವುದನ್ನು ವ್ಯಂಗ್ಯತೆಯ ಮೂಲಕ ತೋರಿಸಿದ್ದಾರೆ.

ಕ್ರಾಂತಿ ಕನ್ಯೆ ಮೋಹಜನ್ಯ
ನಿನ್ನ ಮದುವೆ ಆಗುವೆ
ಕ್ರಾಂತಿ ಕಿಡಿಯ ಸಿಡಿಸುವಾಗ
ನಾನು ನಿನ್ನ ತಬ್ಬುವೆ (ನನ್ನವಳಿಗೆ)

'ಸಾಮಾಜಿಕ ದುಃಸ್ಥಿತಿಗೆ ಇಳಿದ ಹೆಣ್ಣನ್ನು ಭಾರತಾಂಬೆಗೆ ಹೋಲಿಕೆ ಮಾಡುತ್ತಾ ಹೆಣ್ಣನ್ನೇ ಸಂಕೇತವಾಗಿ ಬಳಸಿಕೊಂಡಿದ್ದಾರೆ. ಭಾರತ ಮಾತೆಗೆ ಒದಗಿರುವ ಆಪತ್ತನ್ನು ತಪ್ಪಿಸುವ ಸಲುವಾಗಿ ಇಡೀ ಬಂಡಾಯದ ಸ್ವರವೇ ನಿನಗಾಗಿ ಹೋರಾಡುತ್ತಿದೆ ಎನ್ನುವುದರ ಸಂಕೇತವಾಗಿದೆ'[೧೦] ಮತ್ತು ಬಿಡುಗಡೆ ಎಂದರೆ ಒಂದು ಸಿದ್ಧಸಂಸ್ಕೃತಿಯ ಕಪಿಮುಷ್ಠಿಯಲ್ಲಿ ಸಿಲುಕಿರುವ ಈ ವ್ಯವಸ್ಥೆಯನ್ನು ಸರಿದೂಗಿಸುತ್ತಾ ನಿನ್ನನ್ನು ಬಿಡುಗಡೆಗೊಳಿಸುವೆ ಎನ್ನುವುದರ ಸಂಕೇತಿಕವಾಗಿ ಒಂದು ಹೆಣ್ಣನ್ನು ಕವಿ ಬಳಸಿದ್ದಾರೆ.

ಕಾರ್ಮೋಡ ಕವಿದಿತ್ತು ಕಗ್ಗಪ್ಪಕೆದರಿತ್ತು
ಕಡುರೌದ್ರ ತುಂಬಿತ್ತು ಬಾನಿನಲ್ಲಿ
ಕ್ರಾಂತಿಕರೆಗೋಗೊಟ್ಟು ಕಪ್ಪುವಸ್ತ್ರವ ತೊಟ್ಟು
ಭೂದೇವಿ ನಿಂತಿತ್ತು ರಾತ್ರಿಯಲ್ಲಿ (ಭವಿಷದ್ಗೀತೆ)

ಇದುವರೆವಿಗೂ ಧಮ, ಸ್ಮೃತಿ, ಗೀತೆಗಳ ನೆಪದಲ್ಲಿ ಶ್ರೇಣೀಕೃತ ಜಾತೀ ವ್ಯವಸ್ಥೆಯನ್ನು ಪರಿಪಾಲಿಸುತ್ತಾ ಇಡೀ ದಲಿತ ಸಮುದಾಯವನ್ನೇ ಅಂಧಕಾರದಲ್ಲಿ ತಳ್ಳಿ ಬದುಕನ್ನು ನಡೆಸುತ್ತಿದ್ದ ಮೇಲುವರ್ಗದ ಜನರ ಬದುಕಿನ ಸಂಕೇತವಾಗಿಯೂ, ಇದುವರೆವಿಗೂ ಅಂಧಕಾರದಿಂದಿದ್ದವರೂ ಕಪ್ಪು ವಸ್ತ್ರವ ಕಳಚಿ ಅಂದರೆ ಕ್ರಾಂತಿಯ ರೂಪವನ್ನು ತಳೆದು ಬಿಡುಗಡೆಯ ಮನೋಭಾವದಿಂದ ಧರ್ಮ, ಜಾತಿ, ಸ್ಮೃತಿ ಗೀತೆಗಳನ್ನು ತಿರಸ್ಕರಿಸಿ ಹೊಸ ಬದುಕನ್ನು ಕಾಣಲು ಹೊರಟಿರುವ ಸಂಕೇತವಾಗಿ ಕವಿ ಈ ಸಾಲುಗಳನ್ನು ಬಳಸಿದ್ದಾರೆ.

ಡಾ. ಸಿದ್ಧಲಿಂಗಯ್ಯನವರು ಸಾಮಾಜಿಕ ಸ್ಥರದಲ್ಲಿ ಪ್ರೀತಿಯನ್ನು, ಪ್ರೀತಿಯ ಸಂಕೀರ್ಣತೆಯನ್ನು ಹಿಡಿಯುವ ಇವರ ತುಡಿತಗಳು ಸೂಕ್ಷ್ಮವಾಗಿವೆ. 'ಮಸಣದ ಚೆಲುವೆ', 'ನನ್ನವಳಿಗೆ' ಎಂಬುವ ಕವನಗಳಲ್ಲಿ ಹೆಣ್ಣನ್ನು ಸಾಂಕೇತಿಕವಾಗಿ ಕ್ರಾಂತಿಗೆ ಬಳಸಿಕೊಳ್ಳಲಾಗಿದೆ.[77] ಇಲ್ಲಿ ವಾಸ್ತವವಾಗಿ ಹೆಣ್ಣನ್ನು ಪ್ರೀತಿಸಿರುವ, ನೋವನ್ನುಂಡಿರುವ ಅನುಭವದ ಚಿತ್ರಣವನ್ನು ಸಾಂಕೇತಿಕವಾಗಿ ತೋರಿಸುತ್ತಾರೆ.

'ಅಂಬೇಡ್ಕರ್ ' ಕವಿತೆಯು ಹಲವು ರೂಪಕ ಸಂಕೇತಗಳಿಗೂ ಮಿಗಿಲಾಗಿ ಒಬ್ಬ ನಾಯಕನನ್ನೇ ಪ್ರಶ್ನಿಸುವ ರೀತಿಯಲ್ಲಿರುವುದನ್ನು ಸಂಕೇತವಾಗಿ ಗಮನಿಸಬಹುದು. ಕವಿಯು ಡಾ. ಅಂಬೇಡ್ಕರ್‌ರವರನ್ನು ಕುರಿತು ಕವನ ಬರೆಯುವಾಗ 'ನಾಡನಡುವಿನಿಂದ ಸಿಡಿದ ನೋವಿನ ಕೂಗೆ, ಆಕಾಶದ ಅಗಲಕ್ಕೂ ನಿಂತ ಆಲವೆ ' ಎನ್ನುವ ಸಾಲಿನಲ್ಲಿ ಇಡೀ ವ್ಯವಸ್ಥೆಯ ಅಸಮಾನತೆಯೊಳಗೆ ಸಿಲುಕಿ ಯಾತನೆಯನ್ನು ಅನುಭವಿಸಿ ಅದನ್ನು ಹೋಲಾಡಿಸಲು ಸಿಡಿದೆದ್ದ ಒಂದು ಚೇತನ ಎಂಬುದರ ಸಂಕೇತವಾಗಿಯೂ ಆಕಾಶದ ಅಗಲಕ್ಕೂ ಅನ್ನುವುದು ಇಡೀ ದೇಶದಾದ್ಯಂತ ಅಂಬೇಡ್ಕರ್‌ರವರ ತತ್ವ ಸಿದ್ಧಾಂತಗಳು ಮತ್ತು ಅವರ ವ್ಯಕ್ತಿತ್ವ ಎಂತಹದು ಎಂಬುದರ ಸಂಕೇತವಾಗಿಯೂ ಬಳಸಿದ್ದಾರೆ. 'ನೀರಿನಾಚೆ ಮೋಡದಾಚೆ ನೊಳಗಿದಂತ ಘೋಷವೆ'ಎಂಬುದು ಇಡೀ ಜಗತ್ತಿನಾದ್ಯಂತ ನಿನ್ನ ತತ್ವ ಸಿದ್ಧಾಂತಗಳು ಪಸರಿಸಿವೆ ಎಂಬುದರ ಸಂತೇತವಾಗಿದೆ.

ಕಪ್ಪುಕ್ಕಿನ ಕೋಳಗಳನು
ಕಡಿದು ಎಸೆದ ವಜ್ರವೇ
ಬಂಗಾರದ ಕೋಳವೊಕ್ಕ
ಮಹಾಬೌದ್ಧ ಬಿಕ್ಕುವೆ (ಅಂಬೇಡ್ಕರ್)

ಈ ಸಾಲುಗಳಲ್ಲಿಯೂ ಹಲವು ಸಂಕೇತಗಳನ್ನು ಬಳಸಲಾಗಿದೆ. ಹಿಂದೂ ಧರ್ಮ ಇದುವರೆಗೂ ದಲಿತ ಜನಾಂಗವನ್ನು ಧರ್ಮದ ಹೆಸರಿನಡಿಯಲ್ಲಿ ಬಂಧಿಸಿಟ್ಟಿತ್ತು. ಅಂತಹ ಕರಾಳ ಬದುಕಿನ ಬಾಂಧವ್ಯವನ್ನು ಕಡಿದೊಗೆದಂತಹ ಸಂಕೇತವನ್ನು ಮತ್ತು ಬೌದ್ಧಧರ್ಮವು ಒಂದು ರೀತಿಯಲ್ಲಿ ಬಂಧನವಾಗಿ ಗೋಚರಿಸಿದರೂ ಅದು ಹಿಂದೂ ಧರ್ಮದ ಕರಾಳತೆಗಿಂತ ಬೌದ್ಧಧರ್ಮದ ಬಂಧನವೇ ಉತ್ತಮ ಎನ್ನುವುದರ ಸಂಕೇತವನ್ನು ಬಳಸಿದ್ದಾರೆ.

'ಹೊಲೆ ಮಾದಿಗರ ಹಾಡು' ಕವನ ಸಂಕಲನದ ಕೊನೆ ಪದ್ಯವಾದ 'ಹಾವುಗಳೇ ಕಚ್ಚಿ, ಪದ್ಯದಲ್ಲಿ ಕವಿಯು ಬಳಸಿರುವಂತಹ ಪ್ರತಮೆಗಳು ಕಪ್ಪುನೆಲ, ಕೆಂಪು ಬಾಳೆ, ಇವೆಲ್ಲ ಪ್ರತಿಮೆಗಳು, ದಲಿತರಲ್ಲಿರುವ ಸಿಟ್ಟು, ಆಕ್ರೋಶ, ಅಂಧಕಾರ ಆವೇಶಗಳನ್ನು ಸೂಚಿಸುವಂತಹವುಗಳು.

ಕಪ್ಪುನೆಲವ ಕೆಂಪು ಮಾಡಿ
ಬಾಳೆಯಾಗಿ ಅರಳಿದವರೆ
ಮುತ್ತಿನಮಳೆ ಹುಯ್ಯುವಾಗ
ಸಿಡಿಲುಬಡಿದು ಸತ್ತವರೆ
ಸೊಕ್ಕಿದವರ ಸುಟ್ಟುಬಿಡಲು
ಬೆಂಕಿಯ ಮಳೆಯಾದವರೆ (ಹಾವುಗಳೇ ಕಚ್ಚಿ)

ಈ ಸಾಲುಗಳು ಕಪ್ಪು ನೆಲವು ಅಂಧಕಾರವನ್ನು, ಕೆಂಪು ಕ್ರಾಂತಿಯ ಸಂಕೇತವನ್ನು ಬಾಳೆಯು ಹೊಸ ಬದುಕಿನ ಕುರುಹುಗಳನ್ನು ಸೂಚಿಸುತ್ತವೆ. ಹಾಗೆಯೇ ದಲಿತರಲ್ಲಿ ಅಡಗಿರುವ ಸಿಟ್ಟು, ಆಕ್ರೋಶ, ಆವೇಶಗಳನ್ನು ಸಿಡಿಲು, ಮತ್ತು ಬೆಂಕಿಯ ಮಳೆಗೆ ಹೋಲಿಕೆ ಮಾಡಿರುವುದನ್ನು ಕಾಣಬಹುದಾಗಿದೆ.

ನೆನ್ನೆ ದಿನ ನನ್ನ ಜನ
ಬೆಟ್ಟದಂತೆ ಬಂದರು (ಸಾವಿರಾರು ನದಿಗಳು)

ಇಡೀ ದಲಿತ ಜನಾಂಗದ ದೊಡ್ಡದಾದ ಸಂಖ್ಯೆಯನ್ನು ಬೆಟ್ಟಕ್ಕೆ ಹೋಲಿಸಲಾಗಿದೆ. ಬೆಟ್ಟಗಳು ಹೇಗೆ ಬಿಸಿಲು ಮಳೆ, ಗಾಳಿ, ಗುಡುಗು ಸಿಡಿಲುಗಳಿಗೆ, ಜಗ್ಗುವುದಿಲ್ಲವೋ ಹಾಗೆಯೇ ತಮ್ಮ ಮೇಲಿನ ದೌರ್ಜನ್ಯದ ಅರಿವನ್ನು ತಿಳಿದ ಮತ್ತು ಸಮಾನತೆಯ ಅರಿವನ್ನು ಮೂಡಿಸಿಕೊಂಡ ದಲಿತರು ಯಾರ ದಬ್ಬಾಳಿಕೆಗೂ ಅಂಜುವವರಲ್ಲ ಎನ್ನುವುದರ ರೂಪಕವಾಗಿದೆ. 'ಲಕ್ಷಾಂತರ ನಾಗರಗಳು ಹುತ್ತಬಿಟ್ಟು ಬಂದಂತೆ' ಎನ್ನುವ ಸಾಲು ದಲಿತರು ನಾಗರ ಹಾವಿನ ರೀತಿಯಲ್ಲಿ ವ್ಯವಸ್ಥೆಯ ವಿರುದ್ಧ ರೋಷದಿಂದ ಹೋರಾಡುವುದರ ಸಂಕೇತವಾಗಿಯೂ, ಭಯದ ವಾತಾವರಣದಲ್ಲಿ ಬದುಕುತ್ತಿದ್ದವರು ಭಯವನ್ನೇ ತುಳಿದು ಹೊರ ಬರುತ್ತಿರುವುದರ ಕುರುಹನ್ನು ತೋರಿಸಲಾಗಿದೆ. 'ಕಪ್ಪುಮುಖ ಬೆಳ್ಳಿ ಗಡ್ಡ, ದಲಿತರ ಬಾಹ್ಯ ಚರ್ಯೆಯಾದರೂ ಉರಿಯುತ್ತಿರುವ ಕಣ್ಣುಗಳು ಅವರು ಅಸಮಾನತೆಯ ವಿರುದ್ಧ ಸಿಟ್ಟಿಗೆದ್ದು ಕ್ರಾಂತಿಯ ಹೋರಾಟಕ್ಕೆ ಸಜ್ಜುಗೊಳಿಸಿದ ರೀತಿಯನ್ನು ಸಂಕೇತಿಸುತ್ತದೆ.'[೧೨] ಇಲ್ಲಿ ಸಾವಿರಾರು ನದಿಗಳು ಎಂಬುದೇ ಒಂದು ಪ್ರತಿಮೆಯಾಗಿ ಕವಿ ಬಳಸಿಕೊಂಡಿದ್ದಾರೆ. ಸಾಗರಕ್ಕೆ ನದಿಗಳು ಹೇಗೆ ಸೇರುತ್ತವೆಯೋ ಹಾಗೆಯೇ ಹೋರಾಟದ ಸಾಗರಕ್ಕೂ ಹಲವು ನದಿಗಳು ಸೇರಿವೆ ಎಂಬುದುರ ಸಂಕೇತವಾಗಿದೆ.

'ಕೆಂಪು ಸೂರ್ಯ' ಕವಿತೆಯಲ್ಲಿ ಬಳಸಿರುವಂತಹ ಬಿರುಗಾಳಿ, ಸಿಂಹ, ಬೆಳಕು, ಎಲ್ಲವೂ ಸಂಕೇತಗಳಾಗಿಯೇ ಕಾಣುತ್ತವೆ. ಬಿರುಗಾಳಿ, ದಲಿತರು ಹೋರಾಟಕ್ಕೆ ಮುನ್ನುಗ್ಗುತ್ತಿರುವುದರ ರಭಸವನ್ನು, ಸಿಂಹ ಎಂಬುದು ಅಸಮಾನತೆಯನ್ನು ಎದುರಿಸುವ ಸಂಕೇತವಾಗಿ, ಬೆಳಕು ಹೊಸ ಬದುಕಿನ ಭರವಸೆಯನ್ನು ಕಾಣುವುದರ ರೂಪಕವಾಗಿ, ಬದುಕಿನಲ್ಲಿ ಹೊಸ ಬೆಳಕನ್ನು ಕಾಣುವ ಕ್ರಾಂತಿಯ ಕಹಳೆಯನ್ನು ಮೊಳಗಿಸುವ ಹೊಸ ಹುರುಪಿನಲ್ಲಿರುವ ದಲಿತರ ಹೋರಾಟದ ಸಂಕೇತಗಳನ್ನು ಈ ಸಾಲುಗಳನ್ನು ಗಮನಿಸ ಬಹುದಾಗಿದೆ.

ಉರಿಯುವ ಪಂಜು ಕೈಯಲ್ಲಿ
ಕ್ರಾಂತಿಯ ಕಿಡಿಗಳು ಕಣ್ಣುಗಳಲ್ಲಿ
ಸಿಡಿದರು ಕೆಂಡದ ಉಂಡೆಗಳು ( ದಲಿತರು ಬರುವರು)

ಕವಿಯ ಈ ಸಾಲುಗಳು ಶತಮಾನಗಳಿಂದಲೂ ಜಾತೀ ವ್ಯವಸ್ಥೆಯ ಬಲೆಯೊಳಗೆ ಸಿಲುಕಿದ ದಲಿತರು ಅದರಿಂದ ನೋವುಂಡವರಾಗಿದ್ದು ಅವರ ಆಕ್ರೋಶ, ಸಿಟ್ಟು, ಪ್ರತಿಭಟನೆಯ ಮನೋಭಾವ, ವ್ಯವಸ್ಥೆಯ ವಿರುದ್ಧ ಸಿಡಿದೆದ್ದಿರುವ ಪ್ರತಿಭಟನಾ ಧ್ವನಿಯನ್ನು ಕವಿಯು ಪಂಜು, ಬೆಂಕಿಯ ಉಂಡೆಗಳು, ಕ್ರಾಂತಿಯ ಕಿಡಿಗಳು ಎಂದು ಹೋಲಿಕೆ ಮಾಡಿದ್ದಾರೆ. ಬೆಂಕಿಯನ್ನು ಅಸಮಾನತೆಯನ್ನು ಸುಟ್ಟುಬಿಡುವ ಪ್ರಮುಖ ಅಸ್ತ್ರವಾಗಿ ಬಳಸಲಾಗಿದೆ. ಪಂಜನ್ನು ದಲಿತರು ಬದುಕಿನಲ್ಲಿ ಕಾಣುವ ಬೆಳಕಿಗೆ ಹೋಲಿಸಿದ್ದಾರೆ. ದಲಿತರ ಗುಂಪನ್ನು ದಟ್ಟ ಮುಗಿಲಿಗೆ ಹೋಲಿಕೆ ಮಾಡಿದ್ದಾರೆ.

ಬಿರಿವವು ಹೂವು ಬನದಲ್ಲಿ
ಹಾರಿದೋ ಹಕ್ಕಿ ನೂರಾರು
ಕಂಡಿತು ಕೆಂಪು ಮೂಡಣದಲ್ಲಿ
ಬೆಳಗಾಯಿತು ಬಡವರಿಗೆ (ದಲಿತರು ಬರುವರು)

ಈ ಸಾಲಿನಲ್ಲಿ ಕಂಡುಬರುವ ಬಿರಿವವು ಹೂವು ಎನ್ನುವ ಮಾತು ಬದುಕಿನಲ್ಲಿ ಶಾಂತಿಯನ್ನು ಪ್ರಶಾಂತತೆಯನ್ನು ಬದುಕಿಗೆ ಭರವಸೆಯನ್ನು ತುಂಬುವ ಸಂಕೇತವಾಗಿದೆ. ಹಾರಿದೋ ಹಕ್ಕಿ ನೂರಾರು' ಎನ್ನುವುದು ದಲಿತರು ಜಾತಿ ವ್ಯವಸ್ಥೆಯ ಗೂಡಿನಲ್ಲಿ ರೆಕ್ಕೆ ಮುದುರಿ ಅಂದರೆ ತಮ್ಮ ಕನಸುಗಳನ್ನೆಲ್ಲ ಮುದುರಿಟ್ಟು ಕುಳಿತಿದ್ದರು. ಆದರೆ ಈಗ ದಲಿತರು ಸ್ವತಂತ್ರವಾಗಿ ಬದುಕನ್ನು ಸಾಗಿಸಲು ಸಾಧ್ಯವಾಗಿದೆ ಎನ್ನುವುದರ ಸಂಕೇತವಾಗಿದೆ. ಕವಿಯು ಪ್ರತಿ ಪದ್ಯದಲ್ಲಿಯೂ ಒಂದಲ್ಲ ಒಂದು ಸಾಲಿನಲ್ಲಿ ಕೆಂಪನ್ನೇ ಆಧಾರವಾಗಿಟ್ಟು ಕೊಂಡಿರುವುದು ಕ್ರಾಂತಿಯ ಸಂಕೇತವಾದರೂ ಅಂದು ಕವಿಯ ಚಿಂತನೆಗಳು ಸಹ ಕಮ್ಯುನಿಸ್ಟ್ ಸಿದ್ಧಾಂತಗಳಿಗೆ ಮಾರುಹೋಗಿತ್ತು ಎಂದು ತಿಳಿಯಬಹುದು ಮತ್ತು ಕಮ್ಯುನಿಸ್ಟ್ ಸಿದ್ಧಾಂತವನ್ನು ತಮ ಕಾವ್ಯದಲ್ಲಿ ತೂರಿಸುವ ಮೂಲ ಉದ್ದೇಶವೂ ಇತ್ತು ಎಂದು ಅರ್ಥೈಸಬಹುದು.

ತುಳಿಯುವ ಜನರನ್ನು ಸುಮ್ಮನೆ ಬಿಡಲಾರೊ
ಮನೆ ಮನೆ ಮುಂದಲ ಗಿಡದಲ್ಲಿ / ನಾವೆಲ್ಲ
ಬರುತೀವಿ ಕೆಂಪಗೆ ಹೂವಾಗಿ
ತುಳಿಯುವ ಜನರನ್ನು ಸುಮ್ಮನೆ ಬಿಡಲಾರೊ' (ಬಿದ್ದಾವು ಮನೆಗಳು)

ಎಂಬ ಮಾತು ಶೋಷಕರ ಬಗೆಗೆ ಕಳಿಗಿರುವ ಅಸಹನೆ ಎಷ್ಟೆಂಬುದು ತಿಳಿಯುತ್ತದೆ. ಕೆಂಪು ಕ್ರಾಂತಿಯ ಸಂಕೇತ, ಕೆಂಪು ಬಣ್ಣ ಜಾಗತಿಕ ಇತಿಹಾಸದಲ್ಲಿ ಕಮ್ಯುನಿಸ್ಟ್ ಸಿದ್ಧಾಂತದ ಸಂಕೇತ. ಹೂವು ಶಾಂತಿಯ ಪ್ರತೀಕ. ಶಾಂತಿಯ ಶೋಷಿತರು ಈಗ ಎಚ್ಚೆತ್ತಿದ್ದಾರೆ. ಪ್ರತಿ ಮನೆಯಲ್ಲೂ ಕೆಂಪು ಹೂವಾಗಿ ಅರಳುತ್ತಾರೆ. ಒಟ್ಟಾಗಿ ಮುಂದೆ ಬರುತ್ತಾರೆ ಎಂಬುದರ ರೂಪಕವಾಗಿದೆ.[೧೩]

'ಕತ್ತೆ ಮತ್ತು ಧರ್ಮ' ಕವಿತೆಯಲ್ಲಿ ಸಮಾಜದಲ್ಲಿ ಮತದ ಹೆಸರಿನಲ್ಲಿ ನಡೆಯುತ್ತಿರುವ ಮೋಸವನ್ನು ಮತ್ತು ಮೌಢ್ಯತೆಯಿಂದ ಆಚರಿಸುತ್ತಿರುವ ಮತವನ್ನು ವಿಡಂಬನೆಯ ಮೂಲಕ ತಿಳಿಸುತ್ತಾರೆ. ಮತದ ಹೆಸರಿನಲ್ಲಿ ಮೋಸ ನಡೆದರೆ ಅದು ಮತದ ದೋಷವೇ ಹೊರತು, ಸಮಾಜದ್ದಲ್ಲ ಎಂಬುದನ್ನು ತಿಳಿಸುತ್ತಾರೆ. ಕವಿಯು ಹೇಳುವಂತೆ ಗೊಡ್ಡು ಧರ್ಮವೂ ದೋಷವೆ ಅದನ್ನು ನಂಬುವ ಜನರ ಆಚಾರವೂ ದೋಷವೇ ಎಂಬುದರ ರೂಪಕವಾಗಿದೆ[೧೪] ಎಂದು ವ್ಯಕ್ತಪಡಿಸುತ್ತಾರೆ.

ಎದ್ದು ನಿಂತಿವೆ ಯಾಕೋ ಮರ ಮಂಜು ಬಂಡೆಗಳ
ದಿಕ್ಕುಗಳ ತುಂಬಿರುವ ದನಿಯಾರದು

ಅಂದಥೆ ಮೂಕ ವ್ಯಕ್ತಿಗಳಾಗಿ ಎಲ್ಲವನ್ನು ಅನುಭವಿಸಿದ ಅಮಾಯಕ ತಾಯಿಯರು ಎಚ್ಚರಗೊಂಡಿರುವುದನ್ನು ಸೂಚಿಸುತ್ತದೆ. ಇದು ದೇಶದ ತುಂಬೆಲ್ಲಾ ವ್ಯಾಪಕವಾಗಿ ಹರಡುತ್ತದೆ ಎಂಬುದರ ರೂಪಕವಾಗಿ ಬಳಸಲಾಗಿದೆ. 'ಮುಖದ ಹುತ್ತದ ಮೇಲೆ ಕೆಂಪು ನಾಗರವು' ಎನ್ನುವುದು ರೊಚ್ಚಿಗೆದ್ದ ಕ್ರಾಂತಿಕಾರಕ ದಲಿತರನ್ನು ಸಂಕೇತಿಸುತ್ತದೆ. ನನ್ನವಳು ಎನ್ನುವ ಪದ ದಲಿತ ಹೆಣ್ಣು ಅಥವಾ ಈ ನೆಲದ ತಾಯಿ ಎಂಬ ಸಾಂಕೇತಿಕ ಅರ್ಥ ಪಡೆಯುತ್ತದೆ.[೧೫]

ಅಪ್ಪನ ಬೆವರಿನ ರಕ್ತವು ಸೋರಿ
ಕೆಂಪಾದವು ಹೂವು

ಚೋಮನ ಮನದಾಳದ ಆಸೆ, ನೋವು, ಸಿಟ್ಟು, ಎಲ್ಲವೂ ಬೆವರಿನ ಹನಿಗಳಂತೆ, ಅವನ ರಕ್ತವೇ ಸೋರಿ ಅದರಿಂದ ಕೆಂಪನೆಯ ಹೂವಾಗಿ ಅರಳಿವೆ ಎಂದು ಹೇಳುತ್ತಾರೆ.

ಮುಂದೆ ಚೋಮನ ಮಗ ಅನ್ಯಧರ್ಮಿಯ ಹೆಣ್ಣುಮಗಳನ್ನು ವಿವಾಹವಾಗುವುದು ತಾನು ಧರ್ಮದ ವಿರುದ್ಧ ಸಾರುವ ಕ್ರಾಂತಿಯ ಸಂಕೇತವನ್ನು ಕವಿ ಸೂಕ್ಷ್ಮವಾಗಿ ತಿಳಿಸುತ್ತಾರೆ.

ಬಾಡಿಗೆ ಬೆಳಕಿನ ಚಂದ್ರನಿಗೆ ರವಷ್ಟು
ಪ್ರಶ್ನೆ ಕೇಳಬೇಕು
ಚಂದದ ಗುಲಾಬಿಯನ್ನು ಮುಳ್ಳುಗಳಿಂದ
ಬಿಡುಗಡೆ ಮಾಡಬೇಕು (ಮಾತಾಡಬೇಕು)

ಬಾಡಿಗೆ ಬೆಳಕಿನ ಚಂದ್ರ ಎಂಬುದು ತಾನು ಬೆಳಗಲೂ ಸ್ವಂತಿಕೆಯ ಬೆಳಕಿಲ್ಲ ಎಂಬುದನ್ನು, ಅಂದರೆ ದಲಿತರು,ಕಾರ್ಮಿಕರು ಅಸಮಾನತೆಯ ಸಮಾಜದಲ್ಲಿ ಭೂಮಿ ಮತ್ತು ಸವಲತ್ತಿನಿಂದ ವಂಚಿತರಾಗಿ ಸ್ವಂತಿಕೆ ಕಳೆದುಕೊಂಡು ಜೀತದಾಳುಗಳಾಗಿ ಕಾರ್ಮಿಕರಾಗಿ ಬದುಕುವ ಸಂಕೇತವಾಗಿಯೂ ಕಿತ್ತು ತಿನ್ನುತ್ತಿರುವ ಮಾಲೀಕರನ್ನು ಜಮೀನ್ದಾರರನ್ನು ಮುಳ್ಳುಗಳಿಗೂ, ಕಾರ್ಮಿಕರು ಮತ್ತು ದಲಿತರನ್ನು ಪರಿಶುದ್ಧವಾದ ಹೂವಿಗೂ ಹೋಲಿಕೆ ಮಾಡುತ್ತಾರೆ.



ಕವಿಯು 'ನನ್ನ ಕವನ' ಕವಿತೆಯನ್ನು ಬರೆಯುವಾಗ ಇಡೀ ವ್ಯವಸ್ಥೆಯ ಸಮಗ್ರ ಚಿತ್ರಣವನ್ನು ಪರಿಚಯಿಸುತ್ತಾರೆ. ಗುಡಿಸಲಿನಲ್ಲಿ ಅರಳುವ ಗುಲಾಬಿ ನಕ್ಷತ್ರ, ಬಡವರ ಮಗಳು ನಿರಾಭರಣೆ, ಹೆಣ್ಣು ತುಳುಕಿಸಿದ ಕಣ್ಣೀರು, ಇಲ್ಲಿ ಬರುವ ಗುಲಾಬಿ, ನಕ್ಷತ್ರ, ನಿರಾಭರಣೆ, ಕುರುಬನ ಕೂಗೂ ಎಲ್ಲವೂ ಇಡೀ ದೇಶದ ಜನರ ಪರಿಸ್ಥಿತಿಯ, ಅವರ ಮೇಲೆ ನಡೆಯುತ್ತಿರುವ ಶೋಷಣೆಯ ದಬ್ಬಾಳಿಕೆಯ ಸಂಕೇತಗಳಾಗಿ ಸಾಗುವ ಕಾವ್ಯಾತ್ಮಕ ಸಂವೇದನೆಯಾಗಿದೆ.

ಆ ಬೆಟ್ಟದಲ್ಲಿ ಬೆಳದಿಂಗಳಲ್ಲಿ
ಸುಳಿದಾಡ ಬೇಡ ಗೆಳತಿ
ಚೆಲುವಾದ ನಿನ್ನ ಮಲ್ಲಿಗೆಯ ಮಯ್ಯ
ಸುಟ್ಟಾವು ಬೆಳ್ಳಿ ಕಿರಣ ( ಸುಟ್ಟಾವು ಬೆಳ್ಳಿ ಕಿರಣ)

ಈ ಪದ್ಯದ ಸಾಲಿನಲ್ಲಿ ಬಳಕೆಯಾಗಿರುವ ಬೆಳದಿಂಗಳು ಮಲ್ಲಿಗೆ ಪದಗಳು ಕವಿಯು ತನ್ನ ಕ್ರಾಂತಿಕಾರಿ ಮನೋಭಾವದಿಂದ ಪ್ರೀತಿ ಪ್ರೇಮದ ಕಡೆಗೆ ಮುಖ ಮಾಡಿರುವುದನ್ನು

ತೋರಿಸುತ್ತದೆ. ಗೆಳತಿಯನ್ನು ತಂಪಾದ ಬೆಳದಿಂಗಳಿಗೂ, ಸುಕೋಮಲವಾಗಿದ್ದು ಸುವಾಸನೆಯನ್ನು ಬೀರುವ ಮಲ್ಲಿಗೆಯ ಹೂವಿಗೆ ಹೋಲಿಕೆ ಮಾಡಿದ್ದಾರೆ. ಬೆಳದಿಂಗಳಿನ ಕಿರಣಗಳು ತನ್ನ ಗೆಳತಿಯನ್ನು ಸುಡುತ್ತವೆ ಎನ್ನುವಾಗ ಕವಿಯ ಮನಸ್ಸು ಕ್ರಾಂತಿಯ ಕಡೆಯಿಂದ ಕೋಮಲತೆಯಡೆಗೆ ಸಾಗಿದೆ ಎಂದು ಹೇಳುವುದರ ಸಂಕೇತವಾಗಿದೆ.

ನೆಲಮುಗಿಲುಗಳ ಸಂಗಮವಿಲ್ಲ
ಪ್ರೀತಿಯ ಎಲ್ಲೆಯ ಅರಿತಿಲ್ಲ
ಹಂಗಿನ ಅರಮನೆ ಭಂಗದ ಗುಡಿಸಲು
ಮನಸುಗಳೊಪ್ಪಿ ಬೆರೆತಿಲ್ಲ (ರಾಗಿಯ ಪ್ರೇಮ)

ಆಳುವ ವರ್ಗ ಮತ್ತು ಆಳ್ವಿಕೆಗೆ ಒಳಪಟ್ಟ ವರ್ಗಗಳು ಎಂದೂ ಒಂದು ಕಡೆ ಈ ಸಮಾಜದಲ್ಲಿ ಸೇರಲಾರವು. ಅರಮನೆ ಮತ್ತು ಗುಡಿಸಲುಗಳು ಹೇಗೆ ಸರಿಸಮವಲ್ಲವೋ ಹಾಗೆಯೇ ಉಳ್ಳವರು ಮತ್ತು ಇಲ್ಲದವರು ಸಮಾನರಾಗಿ ಬದುಕಲು ಸಾಧ್ಯವಿಲ್ಲ ಎಂಬುದನ್ನು ಕವಿ ಸಾಂಕೇತಿಕವಾಗಿ ಅನಾವರಣಗೊಳಿಸುತ್ತಾರೆ.

ಮರಮರದ ಮೇಲೆಲ್ಲ ನೋವು ಕೂಗುತ್ತಿತ್ತು
ಸತ್ತವರ ನಿಟ್ಟುಸಿರು ಪ್ರೇತವಾಗಿ
ಮುರಿದ ಮನ ಇರಿದ ಎದೆ
ಕತ್ತಲೆಯು ಮುತ್ತಿರುವ ನಾಡಿನಲ್ಲಿ
ನನ್ನ ಒಲವಿನ ಹೂವ ಕಂಡಿರೇನು (ದೋಣಿಯ ಹಾಡು)

ಕಿತ್ತು ತಿನ್ನುತ್ತಿದ್ದ ಜಾತೀ ವ್ಯವಸ್ಥೆಯ ಸಮಾಜದಲ್ಲಿ ಸಿಲುಕಿ ನೊಂದು ಬೆಂದು ಅವರಲ್ಲಿದ್ದ ಆಸೆ ಕನಸುಗಳೆಲ್ಲವೂ ಹಾಗೆಯೇ ಕನಸುಗಳಾಗಿ ಉಳಿಯುವುದರ ರೂಪಕವಾಗಿಯೂ ಮತ್ತು ಕತ್ತಲೆಯು ಮುತ್ತಿರುವ ನಾಡು ಎಂಬುದು ಬದುಕಿನ ಕರಾಳತೆಯನ್ನು, ಅಂಧಕಾರವನ್ನು, ಕಷ್ಟದಲ್ಲಿರುವ ಜನರ ಬದುಕನ್ನು ಚಿತ್ರಿಸುತ್ತದೆ. ಒಲವಿನ ಹೂವು ಎಂಬುದು ಬದುಕಿನಲ್ಲಿ ಸುಖವನ್ನು ಕಾಣುವ ನೆಮ್ಮದಿಯ ಹಂತವನ್ನು ತಲುಪುವ ಸಂಕೇತವಾಗಿದೆ. ಕವಿಯ 'ನಿನ್ನ ಕಣ್ಣಿನ ಮಾತು' ಕವನದಲ್ಲಿ ಬರುವ ಗುಡುಗು, ತಂಪು ತಾರೆಗಳು, ಹಾಲುಚೆಲ್ಲುವ ಚಂದಿರ, ಎಲ್ಲವೂ ರೂಪಕ ಸಂಕೇತಗಳಾಗಿಯೇ ಬಳಕೆಯಾಗಿವೆ. ಗುಡುಗು ಬಡತನದ ನೋವುಂಡವರ ಆಕ್ರಂದನವಾಗಿಯೂ ಚಂದಿರ

ತಂಪುತಾರೆ ಹಾಲು ಪರಿಶುದ್ಧತೆಯ ಬದುಕನ್ನು ಕಾಣುವ ಭರವಸೆಯ ಸಂಕೇತವಾಗಿಯೂ ಮತ್ತು ಕವಿಯು ಕ್ರಾಂತಿ ಪಥದಿಂದ ಪ್ರೀತಿ ವಿಶ್ವಾಸದ ಕಡೆಗೆ ಅವರ ಮನಸ್ಸು ಪರಿಪಕ್ವವಾಗಿರುವ ರೂಪಕವಾಗಿಯೂ ಗೋಚರಿಸುತ್ತದೆ.

ಜಲವಿಲ್ಲದ ಈ ಭೂಮಿಯ ಮೇಲೆ
ಸಾವು ಹಸಿವುಗಳೇ ಅಲೆಯದಿರಿ
ಬಲವಿಲ್ಲದ ಬಳ್ಳಿಯ ಮೇಲೆ
ಘೋರ ವೃಕ್ಷಗಳೇ ಎರಗದಿರಿ (ಕೋರಿಕೆ)

ರಕ್ತಮಾಂಸಗಳ ಜೋಡಣೆಯೇ ಇಲ್ಲದಂತಹ ಬಡವರ ಬಡಕಲು ದೇಹದ ಸ್ಥಿತಿಯನ್ನು ತಿಳಿಸುತ್ತಾ ಅವುಗಳ ಮೇಲೆ ಸಾವು ಹಸಿವುಗಳು ಸವಾರಿ ಮಾಡುವುದನ್ನು, ಶಕ್ತಿಯೇ ಇಲ್ಲದ ಬಡಕಲು ದೇಹದ ಮೇಲೆ ಯಜಮಾನಿಕೆಯ ವೃಕ್ಷವು ಘೋರವಾಗಿ ದಾಳಿ ಮಾಡುವುದನ್ನು ಕವಿಯು ರೂಪಕವಾಗಿ ಬಳಸಿದ್ದಾರೆ. 'ಭೂತನ ಕತೆ' ಕವಿತೆಯಲ್ಲಿ ಕಂಡುಬರುವಂತಹ 'ಕತ್ತಲೆ ಮುಖ' ದಲಿತರ ಬದುಕಿನ ಕರಾಳತೆಯನ್ನು 'ಕೆಂಡದಕಣ್ಣು' ಬದುಕಿನ ಕರಾಳತೆಯಿಂದ ಬೇಸತ್ತ ಜನರು ರೌದ್ರಾವತಾರವನ್ನು ತಾಳಿ ಕ್ರಾಂತಿಯ ಕಹಳೆಯನ್ನು ಮೊಳಗಿಸುವ ರೂಪಕವಾಗಿದೆ.

ಡಾ. ಸಿದ್ಧಲಿಂಗಯ್ಯನವರ 'ತಬರನ ಹಾಡು', 'ಸಂಪಿಗೆಯ ಮರದಲ್ಲಿ' ಕವನದಲ್ಲಿ ಬಳಸಿರುವ 'ಕೆಂಪು ಕಮಲ' ಬಡವರು ಶ್ರೀಮಂತರ ವಿರುದ್ಧ ಕ್ರಾಂತಿಯನ್ನು ಸಾರುವುದರ ಸಂಕೇತವಾಗಿಯೂ ಬೆಳಕು ಚೆಲ್ಲುವ ಸೂರ್ಯ ಬಡವರ ಬಿಡುಗಡೆಯ ಸಂಕೇತವಾಗಿಯೂ ಕವಿ ಬಳಸಿದ್ದಾರೆ ಎನ್ನಬಹುದು.

ಗಗನಸಾಗರದಲ್ಲಿ ಮುಗಿಲದೋಣಿಯ ಸಾಲು
ಎಣಿಸಿದಷ್ಟೂ ಮಿಗುವ ಜನಸಂದಣಿ
ಕೆಂಪು ಸೂರ್ಯನು ಹುಟ್ಟಿ ಮೆರವಣಿಗೆ ಬರುವಾಗ
ಕಪ್ಪುಕಾಡಿನ ಹಾಡು ಮೊಳಗುತ್ತಿತ್ತು (ಸಂಪಿಗೆಯ ಮರದಲ್ಲಿ)

ಉಳ್ಳವರ ವಿರುದ್ಧ ಜನರು ನಡೆಸುತ್ತಿರುವ ಹೋರಾಟವನ್ನು ಕವಿಯು ಗಗನದಲ್ಲಿ ಮೋಡಗಳು ಹಿಂಡು ಹಿಂಡಾಗಿ ಚಲಿಸುವಂತೆ ಎಂದು ಹೋಲಿಸುತ್ತಾರೆ. ಈ ಜನರು

ಎಣಿಸಲು ಅಸಾಧ್ಯವಾದಷ್ಟು ಸಂಖ್ಯೆಯಲ್ಲಿ ಸೇರಿದ್ದಾರೆ. ಅವರು ನಡೆಸುತ್ತಿರುವ ಚಳುವಳಿಯು ಅವರ ಕರಾಳ ಬದುಕನ್ನು ದೂರ ಸರಿಸಿ, ಸುಖದ ಬದುಕನ್ನು ಬೆಳಗಿಸುವ ಸಂಕೇತವನ್ನು ತೋರಿಸಿಕೊಟ್ಟಿದ್ದಾರೆ.

ಅಜ್ಜಿಯ ಹಾಡು' ಕವಿತೆಯು ಚೋಮನದುಡಿ ಕಾದಂಬರಿಯಲ್ಲಿನ ಅಜ್ಜಿಯ ಸಂಪ್ರದಾಯದ ತೀರ್ಮಾನವನ್ನು ಕುರಿತಾದ ವಸ್ತುವನ್ನು ಒಳಗೊಂಡಿದ್ದರೂ ಕವನದುದ್ದಕ್ಕೂ ರೂಪಕ ಸ ಂಕೇತ ಪ್ರತಿಮೆಗಳನ್ನು ಬಳಸಿರುವುದನ್ನು ಕಾಣಬಹುದು.

ಕಲ್ಲುಗಳೆಂದು ಕಳಸಗಳಲ್ಲ
ಹೊಲೆಯರಿಗೆಂದೂ ನೆಲವಿಲ್ಲ
ಕಪ್ಪುನಾಯಿ ಕೆಂಪಾಗುವುದಿಲ್ಲ
ಹೊಲೆಯರಿಗೆಂದೂ ಬೆಲೆಯಿಲ್ಲ

ಕಾದಂಬರಿಯಲ್ಲಿ ಬರುವ ಅಜ್ಜಿಯು ದಲಿತರ ಬದುಕು ಯಾವುದೇ ಕಾರಣಕ್ಕೂ ಹೊಸ ದಿಕ್ಕಿನತ್ತ ಸಾಗಲು ಇಚ್ಛಿಸದ ರೀತಿಯಾಗಿದೆ. ಅಜ್ಜಿಯ ತೀರ್ಮಾನವು, ದಲಿತರ ಕರಾಳ ಬದುಕಿನಲ್ಲಿ ಭರವಸೆಯ ಬೆಳಕು ಮೂಡುವುದಿಲ್ಲ ಎನ್ನುವುದರ ರೂಪಕವಾಗಿದೆ. ಇಲ್ಲಿ ಕವಿ ಕಪ್ಪನ್ನು ಬದುಕಿನ ಕರಾಳತೆಗೂ, ಕೆಂಪನ್ನು ವ್ಯವಸ್ಥೆಯ ವಿರುದ್ಧ ಸಿಡಿದೇಳುವ ರೂಪಕವಾಗಿಯೂ, ಕಲ್ಲನ್ನು ಹಿಂದಿನಿಂದಲೂ ನಡೆದು ಬಂದಿರುವ ಸಂಪ್ರದಾಯ ಶರಣತೆಯ ಜಡತೆಗೆ ಹೋಲಿಸಲಾಗಿದೆ.

ಡಾ. ಸಿದ್ಧಲಿಂಗಯ್ಯನವರು ತಮ್ಮ ಬರವಣಿಗೆಯ ಕಾಲಘಟ್ಟದಲ್ಲಿ ಇಡೀ ಸಾಮಾಜಿಕ ವ್ಯವಸ್ಥೆಯನ್ನು ಸಮಗ್ರವಾಗಿ ಅರಿತವರಾಗಿದ್ದರಿಂದ ಅಲ್ಲಿ ಬದುಕುತ್ತಿದ್ದ ದಲಿತರ ಕಾರ್ಮಿಕರ, ರೈತರ ಮತ್ತು ಹೆಣ್ಣುಮಕ್ಕಳ ಬದುಕಿನ ಅಸಹಾಯಕ ಸ್ಥಿತಿಯ ಕರಾಳತೆಯನ್ನು ರೂಪಕ ಸಂಕೇತ ಮತ್ತು ಪ್ರತಿಮೆಗಳ ಮೂಲಕ ಚಿತ್ರಿಸಿದ್ದಾರೆ. ಮತ್ತು ಅವರ ಬರವಣಿಗೆಯಲ್ಲಿ ನೇರವಾದ ಸಮಾಜ ಪರಿವರ್ತನೆಯ ದಲಿತರ ಬಿಡುಗಡೆಯ ಧ್ವನಿಯಿದೆ. ಇದುವರೆವಿಗೂ ಸಿದ್ಧಮಾದರಿಯಂತೆ ರೂಪುಗೊಂಡಿದ್ದ ಜಡ್ಡು ಹಿಡಿದು ಕುಳಿತಿದ್ದ ಸಂಪ್ರದಾಯ ಶರಣತೆಯನ್ನು ಪ್ರಶ್ನಿಸುವ ಅವುಗಳನ್ನು ಪರಿವರ್ತಿಸುವ ಪ್ರಯತ್ನದ ಒಂದು ಭಾಗವಾಗಿ ಕವನಗಳನ್ನು ಬರೆಯಲು ಸಾಧ್ಯವಾಯಿತು ಎಂದು ಹೇಳಬಹುದಾಗಿದೆ.

## ಅಡಿಟಿಪ್ಪಣಿಗಳು

೧. ನನ್ನ ಜನಗಳು ಮತ್ತು ಇತರ ಕವಿತೆಗಳು, ಡಾ. ಸಿದ್ಧಲಿಂಗಯ್ಯ, ಮುನ್ನುಡಿ ಡಿ.ಆರ್. ನಾಗರಾಜ್, ಪುಟ-IX

೨. ಅದೇ, ಪುಟ-XVII

೩. ದಲಿತ ಕಾವ್ಯ ಕುತೂಹಲ, ಎಲ್. ರಾಜಶೇಖರಯ್ಯ, ತ.ವೆಂ.ಗ್ರಂಥಮಾಲೆ, ಪುಟ-೫೮-೫೯.

೪. ಊರಿಕಂಡಾಯ, ಡಾ. ಸಿದ್ಧಲಿಂಗಯ್ಯ, ಪುಟ-೨೫೭.

೫. 'ಬಡವರ ನಗುವಿನ ಶಕ್ತಿ ಡಾ. ಸಿದ್ಧಲಿಂಗಯ್ಯ', ಸಂ. ದಂಡಪ್ಪ, ಅಂಕಿತಪ್ರಕಾಶನ, ಪುಟ-೨೦೫

೬. ಅದೇ, ಪುಟ-೨೦೬

೭. ಅದೇ, ಪುಟ-೨೦೮-೨೦೯.

೮. ನನ್ನ ಜನಗಳು ಮತ್ತು ಇತರ ಕವಿತೆಗಳು, ಡಾ. ಸಿದ್ಧಲಿಂಗಯ್ಯ, ಕ್ರಾಂತಿಸಿರಿ ಪ್ರಕಾಶನ, ಮೊಗಳ್ಳಿ ಗಣೇಶ್‌ರವರ ನೊಂದವರ ನಾದ, ಪುಟ-XVIII

೯. ಊರುಕೇರಿ-೧, ಡಾ.ಸಿದ್ಧಲಿಂಗಯ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂ.ಪುಟ-೧

೧೦. ಬಡವರ ನಗುವಿನ ಶಕ್ತಿ, ಸಂ. ದಂಡಪ್ಪ, ಅಂಕಿತ ಪ್ರಕಾಶನ, ಪುಟ-೨೦೬.

೧೧. ಅದೇ, ಪುಟ-೨೦೬.

೧೨. ದಲಿತ ಕಾವ್ಯ ಕುತೂಹಲ, ಪ್ರೊ|| ಎಲ್. ರಾಜಶೇಖರಯ್ಯ, ತ.ವೆಂ. ಸ್ಮಾರಕ ಗ್ರಂಥಮಾಲೆ, ಪುಟ-೭೧.

೧೩. ಅದೇ, ಪುಟ-೫೩

೧೪. ಅದೇ, ಪುಟ-೫೮.

೧೫. ಅದೇ, ಪುಟ-೬೪

# ಅಧ್ಯಾಯ -೩

## ಡಾ॥ ಸಿದ್ಧಲಿಂಗಯ್ಯನವರ ಕಾವ್ಯದ ಭಾಷೆ ಮತ್ತು ಮಂಡನಾಕ್ರಮ

ಕನ್ನಡ ಸಾಹಿತ್ಯ ಬರವಣಿಗೆಯು ಇದುವರೆಗೂ ಹಲವು ಸಾಹಿತ್ಯ ಘಟ್ಟಗಳಲ್ಲಿ ರಚಿತವಾಗಿರುವುದನ್ನು ಕಾಣಬಹುದಾಗಿದೆ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಹೀಗೆ ಹಲವು ಘಟ್ಟಗಳಲ್ಲಿ ಭಾಷೆಯು ತನ್ನ ಸ್ವರೂಪವನ್ನು ಪಡೆಯುತ್ತಾ ಬಂದಿತು. ಆದರೆ ಶತಮಾನಗಳಿಂದಲೂ ಮಂಡಿತವಾಗಿರುವ ಭಾಷೆಯು ಸುಮಾರು ೭೦ರ ದಶಕದವರೆಗೂ ಒಂದು ಸಿದ್ಧಮಾದರಿಯ ಭಾಷೆಯಾಗಿಯೇ ಮಂಡಿತವಾಗುತ್ತಾ ಬಂದಿದೆ. ಆದರೆ ಭಾಷೆಯ ಪರಿಕಲ್ಪನೆಯನ್ನು ನಾವು ಗಮನಿಸಿದಾಗ ಮೌನದ ಭಾಷೆ ಅನ್ನೋದು ಕೂಡ ಇದೆ ಎಂದು ತಿಳಿಯಬಹುದು. ಸಾವಿರಾರು ವರ್ಷಗಳ ಕಾಲ ದಲಿತರು ಮೌನದ ಭಾಷೆಯನ್ನು ಆಚರಿಸಿಕೊಂಡು ಬಂದಿದ್ದಾರೆ.[೧]

ಶತಶತಮಾನಗಳಿಂದಲೂ ವಿದ್ಯೆ ಆಯುಧ ಮತ್ತು ಅಧಿಕಾರದಿಂದ ವಂಚಿತರಾಗಿದ್ದ ದಲಿತರು ಮೌನವಾಗಿಯೇ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವಂತಹ ಪರಿಸ್ಥಿತಿ ನಿರ್ಮಾಣಗೊಂಡಿತ್ತು. ಇದುವರೆಗೂ ಮೇಲುವರ್ಗದವರ, ಮಾಲೀಕರ ಎಲ್ಲಾ ಹಿಂಸೆಗಳನ್ನು ಸಹಿಸಿಕೊಂಡು ಬಂದ ದಲಿತರು, ರೈತರು, ಕಾರ್ಮಿಕರು ತಮ್ಮದೇ ಆದ ಪ್ರತಿಭಟನೆಯನ್ನು ಒಂದು ಕಾಲಕ್ಕೆ ಪ್ರಾರಂಭಿಸಿದರು. ೭೦ರ ದಶಕದಲ್ಲಿ ಪ್ರಾರಂಭವಾದಂತಹ ಈ ಪ್ರತಿಭಟನೆಯ ಶಕ್ತಿಗಳು ತಮ್ಮ ಮನದಾಳದಲ್ಲಿ ಅದುವರೆಗೂ ಮೌನ ಭಾಷೆಯಾಗಿ ಅಡಗಿದ್ದಂತಹ ನೋವು, ಸಿಟ್ಟು, ಆಕ್ರೋಶ, ಎಲ್ಲವನ್ನು ಒಂದು ಪ್ರತ್ಯೇಕ ಭಾಷೆಯ ಮೂಲಕವೇ ಮಂಡಿಸಲು ಆರಂಭಿಸಿದರು.

ದಲಿತರ ಭಾಷೆಯನ್ನು ದಲಿತ ಕೇಂದ್ರಿತ ನೆಲೆಯಿಂದ ನೋಡಬೇಕು ಎಂಬುದನ್ನು ಬರಗೂರು ರಾಮಚಂದ್ರಪ್ಪನವರು ಅಭಿಪ್ರಾಯಪಡುತ್ತಾರೆ.[೨] ಆದರೆ ಕನ್ನಡ ಸಾಹಿತ್ಯದಲ್ಲಿ ನವೋದಯ, ಪ್ರಗತಿಶೀಲ ನವ್ಯ ಘಟ್ಟಗಳು ಅಂತ್ಯಗೊಳ್ಳುತ್ತಿದ್ದಂತೆ ಬಂಡಾಯ ಮತ್ತು ದಲಿತ ಸಾಹಿತ್ಯ ಘಟ್ಟಗಳು ತಲೆ ಎತ್ತತೊಡಗಿದವು. ಆದರೆ ನವೋದಯ ನವ್ಯ ಕಾಲಘಟ್ಟದಲ್ಲಿ ಮಂಡಿತವಾಗಿದ್ದ ಭಾಷೆಗಿಂತ ದಲಿತ ಮತ್ತು ಬಂಡಾಯ ಸಾಹಿತ್ಯ ಭಾಷೆಗಳು ಭಿನ್ನ ರೀತಿಯಲ್ಲಿ ಮಂಡಿತವಾಗತೊಡಗಿದವು. ಸುಮಾರು ೭೦ರ ದಶಕದಲ್ಲಿ ಸಾಮಾಜಿಕವಾಗಿ,

ಸಾಹಿತ್ಯಿಕವಾಗಿ, ಧಾರ್ಮಿಕವಾಗಿ ಮತ್ತು ಆರ್ಥಿಕವಾಗಿ ದಲಿತ ಚಳುವಳಿಗಳು ಪ್ರಾರಂಭವಾಗುತ್ತಿದ್ದಂತೆಯೇ ದಲಿತರ ನಿಜವಾದ ಭಾಷೆ ಯಾವುದು ಎಂದು ಗೋಚರಿಸತೊಡಗಿತು.

ದಲಿತರ ಭಾಷೆಯನ್ನು ಕುರಿತು ಮಾತನಾಡುವಾಗ ದಲಿತರಿಗೆ ಅವರದೇ ಆದ ಒಂದು ಭಾಷೆ ಇದೆ ಎನಿಸುತ್ತದೆ. ಇದು ಎಪ್ಪತ್ತರ ಕಾಲಘಟ್ಟಕ್ಕೆ ಹಸಿವಿನ ಭಾಷೆಯಾಗಿದೆ ಎನಿಸುತ್ತದೆ. ಆದರೆ ಈ ಹಸಿವಿನ ಭಾಷೆಯ ಮೇಲೆ ಒಂದು ಸಿದ್ಧಮಾದರಿಯಂತಿರುವ ಭಾಷೆ ಸವಾರಿ ಮಾಡುತ್ತಿದೆ ಎನಿಸುತ್ತದೆ. ಒಂದು ವರ್ಗ ಆಳುವ ಸ್ಥಾನದಲ್ಲಿ ಅಥವಾ ಸಿದ್ಧಮಾದರಿಯಾಗಿ ರೂಪುಗೊಂಡಿರುವ ಭಾಷೆಯ ಜಾಗದಲ್ಲಿ ನಿಂತು ನೋಡಿದಾಗ ಮಾತ್ರ ದಲಿತರ ಭಾಷೆ ನಮಗೆ ಗೋಚರಿಸುತ್ತದೆ. ದಲಿತರಾಡುವ ಭಾಷೆ ಅವರ ಹಸಿವಿನ ಭಾಷೆಯಾಗಿರುವ ಕಾರಣ ಅದರ ಮಂಡನಾಕ್ರಮದಲ್ಲಿ ನಾವು ವ್ಯಾಕರಣವನ್ನು ಹುಡುಕುವಂತಹ ಅಗತ್ಯತೆಯಿಲ್ಲ.[೩]

೧೯೭೦ರಲ್ಲಿ ದಲಿತರ ಹಸಿವಿನ ಭಾಷೆಯ ಮೂಲಕವೇ ಒಂದು ಚಳುವಳಿ ನಡೆಸಲು ಸಾಧ್ಯವಾಯಿತು. ೭೦ರ ದಶಕದ ಆರಂಭದಲ್ಲಿ ಬಂದ ಈ ಹಸಿವಿನ ಭಾಷೆ ಮೊದಲು ಜನಸಾಮಾನ್ಯರಿಗೆ ತಲುಪಲು ಕಷ್ಟವಾಯಿತು. ನಂತರ ಜನರಿಗೆ ಈ ಭಾಷೆ ತಲುಪಿ ಅರ್ಥವಾಗುತ್ತಿದ್ದಂತೆ ೭೦ರ ದಶಕದ ಚಳುವಳಿ ತೀವ್ರತೆಯನ್ನು ಪಡೆದುಕೊಳ್ಳಲು ಸಾಧ್ಯವಾಯಿತು. ಹೀಗಾಗಿ ದಲಿತರ ಹೋರಾಟದ ಜೊತೆ ಜೊತೆಯಲ್ಲಿಯೇ ಭಾಷಾ ಚಳುವಳಿಯೊಂದು ತನ್ನ ಸ್ವರೂಪವನ್ನು ಪಡೆಯುತ್ತಾ ಹೋಯಿತು. ಹೀಗೆ ಒಂದು ಹೋರಾಟದ ಭಾಷೆ ತೀವ್ರತೆಯನ್ನು ಪಡೆಯಬೇಕಾದರೆ ಅದರ ಚಿಂತನೆ ಮತ್ತು ಕ್ರಿಯಾಶೀಲತೆಯು ಅತಿ ಮುಖ್ಯವಾಗುತ್ತದೆ.

ಯಾವುದನ್ನು ನಾವು ಬಹುಸಂಸ್ಕೃತಿಯ ಭಾರತೀಯ ಸಮಾಜ ಅಂತ ಕರೆಯುತ್ತೇವೆಯೋ ಅದರ ಭಾಷಾ ಚರಿತ್ರೆಗಳು ಭಿನ್ನವಾದವುಗಳು. ಭಾರತೀಯ ಸಮಾಜದಲ್ಲಿನ ಜನರು ತೊಡುವ ಬಟ್ಟೆಗೂ ಒಂದು ಅದರದೇ ಆದ ಭಾಷೆ ಇದೆ ಎನಿಸುತ್ತದೆ. ಅದು ಆ ಸಮಾಜದ ಸ್ಥಿತಿಯನ್ನು ತಿಳಿಸುತ್ತದೆ. ಇಂತಹ ಭಾಷೆ ಭಾಷಾ ವಿಜ್ಞಾನವನ್ನು ಮೀರಿದ್ದು ಭಾಷೆಯ ಒಂದು ಸಮುದಾಯದ ಚಾರಿತ್ರಿಕತೆಯನ್ನು

ಮಂಡಿಸುತ್ತದೆ. ಹೇಗೆಂದರೆ ಡಾ. ಅಂಬೇಡ್ಕರ್ ಹೇಳುವಂತೆ ನನಗೆ ಒಂದು ತಾಯ್ನಾಡಿಲ್ಲ ಅಂತ ನಾನು ಹೇಳಲು ಹಿಂಜರಿಯುವುದಿಲ್ಲ. ಯಾಕೆಂದರೆ ನನ್ನನ್ನು ಅತ್ಯಂತ ಕೀಳಾಗಿ ಕಾಣುವ ಈ ನಾಡನ್ನು, ನನ್ನನ್ನೇ ಅತ್ಯಂತ ಕೀಳಾಗಿ ಕಾಣುವ ಈ ಧರ್ಮವನ್ನು ನನ್ನ ನಾಡು ನನ್ನ ಧರ್ಮ ಅಂತ ಒಪ್ಪಲು ನನಗೆ ಆಗುವುದಿಲ್ಲ ಅಂತ ವಿಷಾದಿಸುತ್ತೇನೆ. ಒಂದು ವೇಳೆ ಈಕೆ ಕಾರಣಕ್ಕೆ ನನ್ನನ್ನು ದೇಶದ್ರೋಹಿ ಅಂತ ಕರೆಯುವುದಾದರೆ ಅದಕ್ಕೆ ನನ್ನ ವಿಷಾದವಿಲ್ಲ. ಯಾಕೆಂದರೆ ನನ್ನನ್ನು ದೇಶದ್ರೋಹಿಯಾಗಿ ಮಾಡಿದ್ದು ಈ ನಾಡು.[೪] ಅಂಬೇಡ್ಕರ್‌ರವರು ಬಳಸಿರುವ ಈ ಭಾಷೆ ಕೇವಲ ಒಂದು ಹೇಳಿಕೆಯಾಗಿ ಮಂಡಿತವಾಗದೆ ಒಂದು ಚಾರಿತ್ರಿಕ ಸತ್ಯವಾಗಿ ಕಾಣಿಸುತ್ತದೆ. ಹೀಗೆ ಬಳಸಿದ ಭಾಷೆ ಕೇವಲ ಅಕ್ಷರ ಮಾತ್ರವಾಗಿರದೆ ಅದೊಂದು ದಲಿತ ಸಮುದಾಯದ ಅನುಭವದ ಭಾಷೆಯಾಗಿರುತ್ತದೆ.

ಹಾಗಾಗಿ ದಲಿತರಿಗೆ ಮುಖ್ಯ ಶಕ್ತಿ ಮತ್ತು ಆಸ್ತಿ ಎಂದರೆ ಅವರಾಡುವ ಭಾಷೆ, 'ದಲಿತರು ಶ್ರೇಣೀಕೃತ ಜಾತಿ ವ್ಯವಸ್ಥೆಯ ಬಲೆಯೊಳಗೆ ಸಿಲುಕಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದ್ದರೂ, ಸಾಂಸ್ಕೃತಿಕವಾಗಿ ಅವರ ಭಾಷಾ ಸಂಪತ್ತು ತುಂಬಾ ಸಮೃದ್ಧವಾದುದಾಗಿದೆ.[೫] ನಿಜವಾಗಿಯೂ ಇಂದು ಬಡವರ, ದಲಿತರ, ಶೂದ್ರರ, ತಳವರ್ಗದವರ, ಅಲ್ಪಸಂಖ್ಯಾತರ, ಹಿಂದುಳಿದವರ ನಗುವಿನ ಶಕ್ತಿ ಇರುವುದು ಅವರಾಡುವ ಭಾಷೆಯಲ್ಲಿ, ಹಾಗಾಗಿ ದಲಿತರಿಗೆ ಒಂದು ಕಡೆ ಶತಶತಮಾನಗಳಿಂದ ಅನುಭವಿಸಿದ ನೋವಿದ್ದರೆ ಮತ್ತೊಂದು ಕಡೆ ಹೊಸ ಕಾಮನ ಬಿಲ್ಲನ್ನು ಕಾಣುವಂತಹ ಒಂದು ನಗುವಿನ ನೋಟಕ್ರಮವೂ ಇದೆ ಎನ್ನಬಹುದು.[೬]

ಡಾ. ಬಸವರಾಜು ಕಲ್ಗುಡಿಯವರು ಕನ್ನಡ ಭಾಷೆಯನ್ನು ಕುರಿತು ಅಭಿಪ್ರಾಯ ಪಡುವಂತೆ 'ಭಾರತೀಯ ಹಿಂದಿ ಭಾಷೆಯ ಸಾಮ್ರಾಜ್ಯದ ನಡುವೆ ಮತ್ತು ಜಗತ್ತಿನ ಇಂಗ್ಲೀಷ್‌ನ ಸಾಮ್ರಾಜ್ಯದ ನಡುವೆ ಕನ್ನಡಿಗರು ಮತ್ತೆ ಗುಲಾಮರಾಗುತ್ತಿದ್ದಾರೆ. ಅದರ ಬದಲು ಅವುಗಳ ಜೊತೆ ಇದ್ದುಕೊಂಡೆ ಕನ್ನಡದ ಚಹರೆಯನ್ನು ಕನ್ನಡ ತನವನ್ನು ಸ್ಥಾಪಿಸಬೇಕು ಎನ್ನುತ್ತಾರೆ.[೭] ಸಿದ್ಧಮಾದರಿಯ ಭಾಷೆಯು ಶಿಕ್ಷಣ ಮಾದರಿಯ ಭಾಷೆಯಾಗಿ ಎಲ್ಲರನ್ನು ಆವರಿಸಿದ್ದರೂ ಅದರ ನಡುವೆಯೇ ತನ್ನತನವನ್ನು ಬಿಟ್ಟುಕೊಡದಂತಹ ಭಾಷೆಯೊಂದು ೭೦ರ ದಶಕದಲ್ಲಿ ಸೃಷ್ಟಿಯಾಯಿತು. ಅದುವೇ ಡಾ. ಸಿದ್ಧಲಿಂಗಯ್ಯನವರ ಹೊಲೆ ಮಾದಿಗರ ಹಾಡಿನ ಭಾಷೆಯಾಗಿದೆ.

೧೯೭೩ರಲ್ಲಿ ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನ ಹೊರ ಬಂದ ಸಂದರ್ಭದಲ್ಲಿ ಅವರು ಬಳಸಿದ ಭಾಷೆಯನ್ನು ಗಮನಿಸಿದ ಕೆಲವು ಸಿದ್ಧಮಾದರಿಯ ಬರಹಗಾರರು ಇವರ ಭಾಷೆಯನ್ನು ಕನ್ನಡ ಕಾವ್ಯ ಭಾಷೆ ಎಂದು ಒಪ್ಪಬೇಕೆ? ಎಂಬ ಗೊಂದಲದಲ್ಲಿದ್ದರು. ಕೆಲವರಿಗೆ ಇವರ ಭಾಷೆ ಬೆಂಕಿಯನ್ನು ಕಾರುವ ಉಂಡೆಗಳಂತೆ ಬಂದೂಕಿನ ಗುಂಡಿನ ಕಿಡಿಗಳಂತೆ ಕಾಣತೊಡಗಿದವು. ಏಕೆಂದರೆ ಇವರ ಕಾವ್ಯ ಭಾಷೆಯು ಸಿಟ್ಟು ಆಕ್ರೋಶ, ತುಂಬಿದ ಪ್ರತಿಭಟನೆಯ ಮನೋಭಾವವನ್ನು ಹೊಂದಿದ ಭಾಷೆಯಾಗಿತ್ತು. ಒಂದು ವೇಳೆ ಇವರು ಆ ಕಾಲಘಟ್ಟಕ್ಕೆ ಈ ರೀತಿ ಬರೆಯದಿದ್ದರೆ ಧಲಿತರು ಎಚ್ಚರಗೊಳ್ಳುವುದು ಕಷ್ಟವಾಗಿತ್ತೇನೋ! ಕೊನೆಗೆ ದಲಿತರು ಸಂಘಟಿತರಾಗುತ್ತಿರಲೂ ಇರಲಿಲ್ಲವೇನೋ ! ದಲಿತ ಸಂಘರ್ಷ ಸಮಿತಿಗಳಂತಹ ಸಂಘಟನೆಗಳೂ ಸೃಷ್ಟಿಯಾಗುತ್ತಿರಲಿಲ್ಲ. ಹೀಗಾಗಿ ಇವರ ಭಾಷೆ ಅಂದು ಬದಲಾವಣೆಯನ್ನು ಬಯಸಿದ ಭಾಷೆಯಾಗಿ ಮಂಡಿತವಾಗುತ್ತಾ ಬಂದಿತು.

ದಲಿತ ಚಳುವಳಿಯೆಂಬುದು ಸುಮಾರು ೧೨ನೇ ಶತಮಾನದಲ್ಲಿ ಮಾದಾರ ಚನ್ನಯ್ಯ ಡೋಹರ ಕಕ್ಕಯ್ಯ ಕಾಳವ್ವೆ ದುಗ್ಗವ್ವೆಯವರಿಂದ ಪ್ರಾರಂಭವಾಗಿದೆ.[೮] ದಲಿತ ಭಾಷಾ ಚಳುವಳಿಯೆಂಬುದು ನಿರ್ಮಾಣಗೊಂಡಿದ್ದು ೭೦ರ ದಶಕದಲ್ಲಿ ಬಂದಂತಹ ಸಿದ್ಧಲಿಂಗಯ್ಯ ದೇವನೂರು ಮಹಾದೇವರವರ ದಲಿತರ ಪರವಾದ ವೈಚಾರಿಕ ಲೇಖನಗಳು ಮತ್ತು ಕಾವ್ಯದ ಮೂಲಕ. ಪ್ರೊ॥ ಬಿ. ಕೃಷ್ಣಪ್ಪನವರ ಹೋರಾಟ, ಬೂಸಾ ಚಳುವಳಿಯನ್ನು ಸಾರಿದ ಬಿ. ಬಸವಲಿಂಗಪ್ಪನವರ ಮೂಲಕ, ದಲಿತ ಸಂಘರ್ಷ ಸಮಿತಿ ಸೃಷ್ಟಿಸಿದ ಪಂಚಮ ಪತ್ರಿಕೆಯ ಮೂಲಕ, ದೇವನೂರು ಮಹಾದೇವರವರ ಅಂಕಣ ಬರಹ ಹಾಗೂ ಸಿದ್ಧಲಿಂಗಯ್ಯನವರ ತೀಕ್ಷ್ಣವಾದ ಬರವಣಿಗೆಯ ಮೂಲಕ.

ಕಠೋರವಾದ ಪರಿಭಾಷೆಯಲ್ಲಿ ವ್ಯವಸ್ಥೆಯನ್ನು ಪ್ರತಿಭಟಿಸಿರುವ ಬಗೆಯನ್ನು ಅವರ ಕವನ ಸಂಕಲನದ 'ಒಂದು ಪದ' ಕವಿತೆಯಲ್ಲಿ ಗಮನಿಸಬಹುದಾಗಿದೆ.

ಇಕ್ರಲಾ ವದೀರ್ಲಾ
ಈ ನನ್‌ಮಕ್ಕಳ ಚರ್ಮ ಎಬ್ರಲಾ
ದೇವ್ರು ಒಬ್ನೇ ಅಂತಾರೆ
ಓಣಿಗೊಂದೊಂದ್ ತರಾ ಗುಡಿ ಕಟ್ಸವ್ರೆ ................
ಇಕ್ರಲಾ ವದೀರ್ಲಾ ಈ ಸೂಳೆ ಮಕ್ಳ ಮೂಳೇ ಮುರೀರ್ಲಾ

ಈ ರೀತಿಯ ಭಾಷೆ ಅದುವರೆಗೂ ಕನ್ನಡ ಕಾವ್ಯ ಲೋಕದಲ್ಲಿ ಬಳಕೆಯಾಗದಿದ್ದ ಕಾರಣಕ್ಕಾಗಿಯೇ ಹಲವರು ಇದು ಕನ್ನಡ ಕಾವ್ಯವೇ ಅಲ್ಲ ಎಂದು ಹೇಳಿದರು. ಆದರೆ ಇಲ್ಲಿ ಬಳಕೆಯಾಗಿರುವ ಭಾಷೆ, ದಲಿತರನ್ನು ತನ್ನ ಲಾಭಕ್ಕಾಗಿ ಬಳಸಿಕೊಂಡು ಸುಖ ಜೀವನ ನಡೆಸುತ್ತಿದ್ದ ಮೇಲುವರ್ಗದ ಜನರು ಇಡೀ ದಲಿತ ಜನಾಂಗವನ್ನು ನಿಕೃಷ್ಟತೆಯಿಂದ ಕಾಣುತ್ತಿರುವಂತಹವರ ವಿರುದ್ಧ ಬಳಸಿರುವ ಸಿಟ್ಟಿನ ಭಾಷೆಯಾಗಿ ಮಂಡಿತವಾಗಿರುವುದನ್ನು ಕಾಣಬಹುದಾಗಿದೆ.[5]

ಡಿ.ಆರ್. ನಾಗರಾಜ್‌ರವರು 'ಹೊಲೆಮಾದಿಗರ ಹಾಡು' ಸಂಕಲನದ 'ಸುಂಟರಗಾಳಿ' ಕವನವನ್ನು ಕುರಿತು ಹೇಳುವಂತೆ

'ಮೂಳೆ ತುಂಬಿದ ಹಣೆಗೆ ಸೊಟ್ಟಸೊಟ್ಟಗೆ ಬಳಿದ
ನಾಮ ವಿಭೂತಿಯಲಿ ಧರ್ಮವಿಲ್ಲ'

ಈ ಸಾಲುಗಳಲ್ಲಿ ಪುರೋಹಿತ ಶಾಹಿಯ ಗೊಡ್ಡು ಪುರಾಣ ಮತ್ತು ಧರ್ಮದಲ್ಲಿ ಯಾವ ತಿರುಳುಗಳಿಲ್ಲ. ಅದು ಕೇವಲ ಆಡಂಬರ ಎಂಬುವ ವ್ಯಂಗ್ಯತೆಯಿದೆ ಎಂದು ಹೇಳುವ ಭಾಷೆ ತುಂಬಾ ಮುಖ್ಯವಾಗಿದ್ದು, ಇದು ಕುವೆಂಪುರವರಂತಹ ಕವಿಗಳಿಗೆ ಅಷ್ಟು ಸುಲಭವಾಗಿ ಸಾಧ್ಯವಾಗಲಿಲ್ಲ. ಆದರೆ ಕವಿ ಅದೇ ಸಮುದಾಯದಿಂದ ಬಂದಿದ್ದರಿಂದ ಅಂತಹದೊಂದು ಭಾಷೆಯನ್ನು ಬಳಸಲು ಸಾಧ್ಯವಾಯಿತು.

ಕ್ವರುಗ್ತೀನಿ ಕ್ವನೆಗೊಂದ್ಸಲ ಕೂಗ್ತೀನಿ
ಬಡ್ಡೀ ದುಡ್ನೋನ್ ಬಂಗ್ಲೆ ಕ್ಯಳ
ತಳಾದೀಗ್ ಸಿಕ್ಕಿರೋ ಮೂಳೆ.....
ನಾ ಮೂಳೆ ನಾ ಇಂಗೇ ಇರಲ್ಲ
ಕೂಗ್ತೀನಿ, ಸಿಡಿತೀನಿ, ಮನುಷ ಆಯ್ತಿನಿ (ಒಂದು ಮೂಳೆಯ ಹಾಡು)

ಕವಿಯು ಬಳಸಿರುವ ಈ ಸಾಲುಗಳು ಇಡೀ ದಲಿತಭಾಷೆಯು ಎಷ್ಟು ರೋಷದಿಂದ ಕೂಡಿರುವುದು ಎಂಬುದನ್ನು ತೋರುತ್ತದೆ. ದಲಿತ ಸಮುದಾಯಕ್ಕೆ ಕವಿಯ ಭಾಷೆ ಮೊದಲು ತೊಡಕಾಗಿ ಕಾಣಿಸಿದರೂ, ತದನಂತರ ಸಮಾಜದಲ್ಲಿ ಒಂದು ಸಂಘರ್ಷ ವೇರ್ಪಡಲು ಅನುವಾಗುತ್ತದೆ. ಬರವಣಿಗೆಯ ಕೊನೆ ಸಾಲಿನಲ್ಲಿರುವಂತೆ ದಲಿತ

ಪ್ರಜ್ಞೆಯ ಭಾಷೆಯ ಅಂತರಾಳದಲ್ಲಿ ಮತ್ತೆ ಸಾಮಾಜಿಕ ನ್ಯಾಯದ ಭಾವನೆ ಮತ್ತು ಮಾನವೀಯತೆ ಅಂತರ್ಗತವಾಗಿದೆ ಎಂದು ಹೇಳಬಹುದು. ಅಂದರೆ ಸಮಾಜದಲ್ಲಿರುವ ಎಡಬಿಡಂಗಿತನವನ್ನು ಕವಿ ಕಠೋರ ಭಾಷೆಯಲ್ಲಿ ಖಂಡಿಸುತ್ತಿದ್ದಾರೆ.

ಕವಿಯು ತನ್ನ ಕವನ ಸಂಕಲನವಾದ 'ಹೊಲೆಮಾದಿಗರ ಹಾಡಿನಲ್ಲಿ' ಬಳಸಿದಂತಹ ಭಾಷೆ ಅದೊಂದು ಇಡೀ ವ್ಯವಸ್ಥೆಯನ್ನು ಪ್ರಶ್ನಿಸುವ ಸಿದ್ಧಮಾದರಿಯ ವ್ಯವಸ್ಥೆಯನ್ನು ಕಾಲಿನಿಂದ ಒದೆಯುವ ಮತ್ತು ತನ್ನ ಭಾಷೆಯ ಮೂಲಕವೇ ಬಳಸುವ ಬಯ್ಗಳದ ಭಾಷೆಯಾಗಿತ್ತು''೧೦ ಇವರ ಭಾಷೆ ಕೇವಲ ಇನ್ನೊಬ್ಬರಿಂದ ಕಲಿತಂತಹ ಭಾಷೆಯಾಗಿರದೆ ಅದು ಅವರ ಅನುಭವದ ಭಂಡಾರದಿಂದ ತೆಗೆದು ಮಾತನಾಡುತ್ತಾ ಬಂದಂತಹ ನಗೆಯ ಮಾತುಗಳು ಮತ್ತು ಜೀವನಾನುಭವದ ನೋವಿನ ಯಾತನೆಯ ಮಾತುಗಳಾಗಿವೆ.

ಗುಡಿಸಲುಗಳು ಗುಡುಗುತಿವೆ
ಬಂಗಲೆಗಳು ನಡುಗುತಿವೆ (ಕ್ರಾಂತಿಪದ)

ಎನ್ನುವ ಕವಿಯ ಈ ಸಾಲುಗಳಲ್ಲಿ ಬಳಸಿರುವ ಭಾಷೆ ತುಂಬಾ ಸರಳತೆಯಿಂದ ಜನ ಸಾಮಾನ್ಯರಿಗೆ ಅರ್ಥವಾಗುವಂತಿದ್ದರೂ ಅದರ ಧ್ವನಿ ಶ್ರೀಮಂತರ ವಿರುದ್ಧ ಬಡವರು ನಡೆಸುತ್ತಿರುವ ಪ್ರತಿಭಟನೆಯನ್ನು ಸೂಚಿಸುತ್ತಿದೆ.

ದಲಿತ ಬರಹಗಾರರು ಬಳಸಿದ ಬರವಣಿಗೆಯ ಭಾಷೆ ಮತ್ತು ಅದರ ಮಂಡನಾಕ್ರಮ ಮೇಲ್‌ಜಾತಿಗೆ ತೋರಿದ ಪ್ರತಿರೋಧವನ್ನು ಸಾಕ್ಷೀಕರಿಸುತ್ತದೆ. ಯಾವುದೇ ಭಾಷೆಯಲ್ಲಿ ಬಳಕೆಯಾಗುವಂತಹ ಶಬ್ದ ಅಥವಾ ಪದ ಆ ಸಮುದಾಯವನ್ನು ಪ್ರತಿನಿಧಿಸುತ್ತಿರುತ್ತದೆ. ಇದು ಆ ಜನಾಂಗದ ಬದುಕಿನ ಚಿತ್ರಣವನ್ನು ಅವರ ಸಾಂಸ್ಕೃತಿಕ ಚಾರಿತ್ರ್ಯವನ್ನು ಮಂಡಿಸುತ್ತಿರುತ್ತದೆ. ಒಬ್ಬ ಬರಹಗಾರನ ಭಾಷೆ ಆ ಜನಾಂಗದ ಅಥವಾ ಜಾತಿಯ ಸಾಂಸ್ಕೃತಿಕ ಪರಿಭಾಷೆಯಾಗುತ್ತಾ ಯಜಮಾನ್ಯ ಸಂಸ್ಕೃತಿಗೆ ಪ್ರತಿರೋಧವನ್ನು ಒಡ್ಡುತ್ತಿರುತ್ತದೆ. ಹಾಗೆಯೇ ಸಿದ್ಧಲಿಂಗಯ್ಯನವರ ಇಕ್ರಲಾ ವದಿರ್ಲಾ ಈ ನನ್‌ಮಕ್ಳ ಚರ್ಮ ಎಬ್ರುಲಾ ಎನ್ನುವ ಭಾಷೆಯು ದಲಿತ ಜನಾಂಗದಲ್ಲಿ ಕ್ರಾಂತಿಯ ಕಿಡಿಯನ್ನು ಹಚ್ಚುವುದರ ಜೊತೆಗೆ ಆ ಜನಾಂಗದ ಸ್ವಾಭಿಮಾನದ ಪ್ರತೀಕವಾಗಿದೆ. ಈ ಭಾಷೆಯು ಯಜಮಾನ

ಸಂಸ್ಕೃತಿಯನ್ನು ಧಿಕ್ಕರಿಸುತ್ತಾ, ದಿಟ್ಟತನದಿಂದ ಮತ್ತು ಹಠಮಾರಿತನದಿಂದ ತಪ್ಪು ಮಾಡಿದವರ ಮುಖಕ್ಕೆ ರಾಚುವಂತಹ ಹಾಗೂ ದಲಿತ ಜನಾಂಗದ ದುರಂತಕ್ಕೆ ಕಾರಣವಾದ ವ್ಯವಸ್ಥೆಯ ವಿರುದ್ಧದ ಸಿಟ್ಟು, ವ್ಯವಸ್ಥೆಯನ್ನು ಧ್ವಂಸ ಮಾಡುವ ಅದಮ್ಯ ಉತ್ಸಾಹ ಮತ್ತು ದಲಿತ ಜನಾಂಗವನ್ನೇ ಒಂದು ಸಂಘರ್ಷಕ್ಕೆ ಅಣಿಗೊಳಿಸುವಂತಹ ಭಾಷೆಯಾಗಿದೆ.

ನೆನ್ನೆ ದಿನ ನನ್ನ ಜನ
ಬೆಟ್ಟದಂತೆ ಬಂದರು

ಡಾ. ಸಿದ್ಧಲಿಂಗಯ್ಯನವರ ಸಾವಿರಾರು ನದಿಗಳಲ್ಲಿನ ಈ ಪದಗಳ ಬಳಕೆಯೇ ಇಡೀ ದಲಿತ ಸಮುದಾಯವನ್ನೇ ಒಂದು ಕಡೆ ಸೇರಿಸುವ ಅವರ ಮನದಾಳದಲ್ಲಿ ದಲಿತ ಜನಾಂಗದ ಏಕತೆಯನ್ನು ಸಾರುವಂತಹ ಭಾಷೆಯಾಗಿ ಧ್ವನಿತವಾಗಿರುವುದನ್ನು ಕಾಣಬಹುದು. ಇಲ್ಲಿ ನನ್ನ ಜನ ಎನ್ನುವ ಭಾಷೆಯ ಬಳಕೆಯೇ ಇಡೀ ದಲಿತ ಸಮುದಾಯ ವನ್ನು ಒಂದೇ ಚೌಕಟ್ಟಿನಡಿಯಲ್ಲಿ ಸ್ವಾಭಿಮಾನದ ಅಲೆಗಳಾಗಿ ಬಂದು ಸೇರುವಂತೆ ಮಂಡಿತವಾಗಿದೆ.

ಇವರು 'ಕತ್ತೆ ಮತ್ತು ಧರ್ಮ' ಕವಿತೆಯನ್ನು ಬರೆಯುವಾಗ ತ್ರಿಪದಿಯಂತೆ ಬರೆದಿದ್ದರೂ ಅದರಲ್ಲಿ ಅಡಗಿರುವ ಭಾಷೆ ಜಾನಪದೀಯ ನೆಲೆಗಟ್ಟಿನ ಮತ್ತು ದಲಿತ ಜನಾಂಗದ ಮೂಲ ದನಿಯನ್ನು ತೋರಿಸುವ ಭಾಷೆಯಾಗಿದೆ. ಹಾಗೆಯೇ ಕವಿಯ 'ಅಲ್ಲೆ ಕುಂತವರೆ' ಎಂಬುದ ಖಂಡ ಕಾವ್ಯದ ಭಾಷೆಯೂ ಸಹ ಇಡಿ ಈದಲಿತ ಸಮುದಾಯವು ತಮ್ಮ ಬದುಕಿನುದ್ದಕ್ಕೂ ಕಂಡಂತಹ ನೋವು ನಲಿವಿನ ಅವರು ಜೀವನದುದ್ದಕ್ಕೂ ಕಂಡುಂಡಂತಹ ಆಡು ಮಾತಿನ ಭಾಷೆಯಾಗಿದೆ. ಇವರು ಬೆಂಗಳೂರು ಗ್ರಾಮಾಂತರ ಪ್ರದೇಶದ ದಲಿತರ ದೇಶಿ ಪದಗಳನ್ನೇ ತಮ್ಮ ಕಾವ್ಯದ ಅಸ್ತ್ರಗಳಾಗಿ ಬಳಸಿಕೊಂಡು, ಅದಕ್ಕೆ ಸಾಹಿತ್ಯಕವಾದ ರೂಪಕ, ಪ್ರತಿಮೆ, ಸಂಕೇತಗಳನ್ನು ಕೊಟ್ಟಿದ್ದಾರೆ. ಇವರ ಪದಗಳ ಬಳಕೆಯಲ್ಲಿನ ನಾಟಕೀಯತೆ, ಶಬ್ದ ಶಕ್ತಿಗಳ ಸಹಜಬಳಕೆ, ವಾಕ್ಯ ಜೋಡಣೆಯಲ್ಲಿ ಲಯಪ್ರಾಸಗಳ ಹೊಂದಾಣಿಕೆ, ಜೊತೆ ಜೊತೆಯಲ್ಲಿಯೇ ದಲಿತರ ಬದುಕನ್ನೇ ದೃಶ್ಯಾವಳಿಗಳಾಗಿ ಅಳವಡಿಸುವಿಕೆ. ಇವೆಲ್ಲವೂ ಕನ್ನಡ ಕಾವ್ಯ ಸಂದರ್ಭಕ್ಕೆ ಅಪರೂಪವಾದವುಗಳು ಎನಿಸುತ್ತವೆ.

ಸಿದ್ಧಲಿಂಗಯ್ಯನವರ ಕಾವ್ಯಭಾಷೆಗೆ ವಾಚ್ಯತೆಯ ಲಕ್ಷಣವಿದ್ದರೂ ಅದನ್ನು ಭಿನ್ನವಾಗಿ ನೋಡಬೇಕಾಗಿದೆ. ದಲಿತರು ಸಮಾಜದಲ್ಲಿ ಇದುವರೆವಿಗೂ ಅನುಭವಿಸಿದ ಕಷ್ಟಗಳನ್ನು ಕವಿಯು ತನ್ನ ನೇರ ನುಡಿ, ನಿಷ್ಠುರ ಮಾತು, ಗಟ್ಟಿಯಾದ ಒರಟುದನಿ ಹೊರಹೊಮ್ಮುತ್ತಿದ್ದಂತೆಯೇ ಅದುವರೆಗೂ ಈ ರೀತಿಯ ಭಾಷಾ ಬಳಕೆಯನ್ನು ಗಮನಿಸಿಸದ ಜನರಿಗೆ ಒಂದು ರೀತಿಯಲ್ಲಿ ಇರುಸುಮುರುಸಾಗುತ್ತದೆ.

ಅಪ್ಪನ ಬೆವರಿನ ರಕ್ತವು ಸೋರಿ
ಕೆಂಪಾದವು ಹೂವು

ಇದೊಂದು ಸಾಲು ಸಾಮಾನ್ಯವಾಗಿ ಕವಿಯ ಮನಸಿನ ಗಾಢತೆಯನ್ನು ಸೂಚಿಸುತ್ತದೆ.ಜೊತೆಗೆ ಈ ಸಾಲಿನ ಅನುಭವಗಳು ದಲಿತರ ಮೇಲಿನ ಶತಮಾನದ ಹೊರೆಯನ್ನು ಸೂಚಿಸಿದೆ.ಇದರಲ್ಲಿ ಶೋಷಣೆಯ ದೊಡ್ಡ ಇತಿಹಾಸವೇ ಅಡಕವಾಗಿದೆ.[೧೧] ಹಾಗೂ ದಲಿತರ ಜೀವನದ ಒಟ್ಟು ಬದುಕನ್ನು ಪ್ರತಿಬಿಂಬಿಸುವ ಭಾಷೆಯಾಗಿ ಮಂಡಿತವಾಗಿದೆ. ಕಾರಂತರಿಂದ ಬರೆಯಲಾಗದಂತಹ ಇಂತಹ ಸಾಲುಗಳು ಸಾಮಾನ್ಯವಾಗಿ ಸಮಾಜದಿಂದ ತಿರಸ್ಕಾರಕ್ಕೊಳಗಾದ ಜನಾಂಗದಿಂದ ಹುಟ್ಟಿದ ಕವಿಯಕಾವ್ಯದಲ್ಲಿ ಈ ಸಂವೇದನೆಯನ್ನುದಾಖಲಿಸುವುದು ತುಂಬಾ ಅನಿವಾರ್ಯವಾಗಿತ್ತು.

ಡಾ. ಸಿದ್ಧಲಿಂಗಯ್ಯನವರ 'ನಗ್ಬೇಕು', 'ಭವಿಷ್ಯದ್ಗೀತೆ', 'ಹಣೆಬರವು ಎಂಬ ನಾಟಕವು', 'ಹಬ್ಬ', 'ಗಳ್ಡಗಳು', 'ಅಡಗೂಲಜ್ಜಿಯ ಕಥೆ', 'ಕ್ರಾಂತಿಪದ', 'ಸತ್ತೋಗೋರಾ' 'ನನ್ನ ಜನಗಳು.....'ದಲಿತರು ಬರವರು' ಇಂತಹ ಹಲವಾರು ಕವನದಲ್ಲಿ ಮಂಡಿತವಾಗಿರುವ ಭಾಷೆಯು ಮೂಕ ಜಗತ್ತನ್ನು ಎಚ್ಚರಿಸುವ ಭಾಷೆಯಾಗಿದೆ. ಈ ಭಾಷೆಯ ಅಬ್ಬರ ಅವರ ಸಾಂಸ್ಕೃತಿಕ ಪ್ರತಿರೋಧದ ಅಗತ್ಯತೆಯೇ ಹೊರತು ಒಂದು ಸಾಹಿತ್ಯ ಸೃಷ್ಠಿಸುವಂತಹ ಅಗತ್ಯವೇನಲ್ಲ. ಸಿದ್ಧಲಿಂಗಯ್ಯನವರ ಭಾಷೆ ಒಂದು ಹಳ್ಳಿಗಾಡಿನಲ್ಲಿ ಹರಿಯುತ್ತಿದ್ದಂತಹ ಹೊಳೆಯ ರೀತಿಯಲ್ಲಿ ನಾಡಿನ ಇಡೀ ದಲಿತ ಸಮುದಾಯವನ್ನೇ ಆವರಿಸಿತು. ಮತ್ತು ಎಚ್ಚರಗೊಳಿಸಲು ಸಾಧ್ಯವಾಯಿತು. ಕವಿಯ 'ರಾಣಿಯ ಪ್ರೇಮ' , 'ದೋಣಿಯ ಹಾಡು' ನಿನ್ನ ಕಣ್ಣಿನ ಹಾಡು ಕೋರಿಕೆ, 'ಕಪ್ಪುಕಾಡಿನ ಹಾಡು'ಕವಿತೆಗಳಲ್ಲಿ ಬರುವಂತಹ ಪ್ರೇಮದ ಕಗ್ಗೊಲೆ, ಒಲವಿನ ಹಗೆ, ಪ್ರೀತಿಯ ಕ್ಷಾಮ' ಎಲ್ಲವೂ ತನ್ನ ದಲಿತ ಸಮುದಾಯದ ಸಾಕ್ಷಿ ಪ್ರಜ್ಞೆಯಲ್ಲಿ ಅಲಾಪಿಸುವ ಅವರ ಕವಿತೆಗಳು ಸರಳವಾಗಿ

ಕಂಡರೂ ಅವುಗಳಲ್ಲಿರುವ ದಲಿತ ಸಂವೇದನೆ, ಸ್ತ್ರೀ ಸಂವೇದನೆ ಮತ್ತು ದುರಂತ ಪ್ರಜ್ಞೆಯು ಕವಿಯ ಮನದಾಳದ ಮಾತುಗಳಾಗಿ ಮಂಡಿತವಾಗಿರುವುದನ್ನು ಕಾಣಬಹುದಾಗಿದೆ.

ಡಾ. ಸಿದ್ದಲಿಂಗಯ್ಯನವರು ೭೦ರ ದಶಕದಲ್ಲಿ ಬರೆದ 'ಹೊಲೆ ಮಾದಿಗರ ಹಾಡು' ಕೃತಿಯು ಕನ್ನಡ ಸಾಹಿತ್ಯ ಲೋಕದಲ್ಲೇ ಒಂದು ಹೊಸ ಅಲೆಯಾಗಿ ಕಡಲಿನ ಅಬ್ಬರಕ್ಕಿಂತ ಒಂದು ಹೆಜ್ಜೆ ಮುಂದೆ ಸುನಾಮಿಯ ರೀತಿಯಲ್ಲಿ ಇಡೀ ನಾಡಿನಲ್ಲಿ ಇದುವರೆಗೂ ರಚಿತವಾಗಿದ್ದ ಭಾಷೆಗೆ ಅಪ್ಪಳಿಸಿದಾಗ ಎಲ್ಲರೂ ದಿಗ್ಭ್ರಮೆಗೊಳ್ಳುವಂತಾಯಿತು. ಇವರ ಬರವಣಿಗೆಯ ತೀಕ್ಷ್ಣತೆ ನೇರವಾದ ಭಾಷೆ, ರೋಷ, ಪ್ರತಿಭಟನೆಯ ರೂಪ, ಕ್ರಾಂತಿಯ ಕಿಡಿಯನ್ನು ಕಾರುವ ಶೈಲಿ ವೇಗವಾಗಿ ಪಸರಿಸಿದವು. ಇವರ ಇಷ್ಟು ರಭಸವಾದ ಭಾಷೆಯು ಇಡೀ ನಾಡಿನಾದ್ಯಂತ ದಲಿತ ಜನಾಂಗದ ಜೀವದ ಸೆಲೆಯಾಗಿ ಮೂಕರಂತಿದ್ದ ಜನರಿಗೆ, ದಾರಿಕಾಣದಂತಿದ್ದವರಿಗೆ ದಾರಿ ತೋರುವ ಜ್ಯೋತಿಯಾಗಿ, ಬದುಕನ್ನು ಹಸನುಗೊಳಿಸುವ ಕಾವ್ಯವಾಗಿ ಹೊರಹೊಮ್ಮತೊಡಗಿದವು.

'ಸಾವಿರಾರು ನದಿಗಳು' ಕವನ ಸಂಕಲನ ಬರೆಯುವ ಹೊತ್ತಿಗೆ ಜಾತಿಯ ನೆಲೆಯಿಂದ ಸ್ವಲ್ಪ ಹೊರಬಂದು ಜಾತ್ಯಾತೀತವಾಗಿ ತುಳಿತಕ್ಕೊಳಗಾದವರನ್ನು ಕುರಿತು ಕವನವನ್ನು ಬರೆಯತೊಡಗಿದರು. ಅಷ್ಟೊತ್ತಿಗೆ ಅವರ ಭಾಷೆಯಲ್ಲಿ ಮಾಗಿದ ಮನಸ್ಸಿನ ಸ್ಥಿತಿಯ ರೂಪ ಕಾಣತೊಡಗಿತು. ಕವಿಯ ಭಾಷೆ ಪ್ರತಿಭಟನೆ ರೋಷ, ಆವೇಶ, ಸಿಟ್ಟು ಆಕ್ರೋಶದಿಂದ ಪರಿಪಕ್ವಗೊಂಡು ನಂತರ ಸ್ವಲ್ಪ ಪ್ರಮಾಣದ ಪ್ರೀತಿ, ಪ್ರೇಮಗಳೂ ಕಾಣಿಸತೊಡಗಿದವು.

ಕವಿಯ ಮೂರನೇ ಕವನ ಸಂಕಲನವಾದ 'ಕಪ್ಪುಕಾಡಿನ ಹಾಡು' ಕವನಗಳನ್ನು ಅಧ್ಯಯನ ಮಾಡಿಧರೆ ಅವರ ಮೊದಲ ಸಂಕಲನದಲ್ಲಿ ಅಭಿವ್ಯಕ್ತಗೊಳ್ಳುವ ಸಿಟ್ಟು ಆಕ್ರೋಶ, ಪ್ರತಿಭಟನೆ, ಪ್ರತಿರೋಧ ಎಲ್ಲವೂ ಇಲ್ಲಿ ಬದಲಾವಣೆಯ ಹಂತದಲ್ಲಿರುವುದನ್ನು ಗಮನಿಸಬಹುದಾಗಿದೆ. ಇಕ್ರಲಾ ವದಿರ್ಲಾ ಎನ್ನುವ ಕವಿಯ ಮೊದಲ ಮಾತುಗಳು ಇಲ್ಲಿ ಕಾಣಸಿಗುವುದಿಲ್ಲ. ಇಲ್ಲಿ ಕವಿಯ ನಿಟ್ಟುಸಿರು, ಮೆಲುಮಾತು, ಸರಸದ ಧ್ವನಿಗಳು ಮಂಡಿತವಾಗಿವೆ. ಮೊದಲಲ್ಲಿದ್ದ ವೇಗದ ಅಬ್ಬರ ಇಲ್ಲಿ ಕಾಣುವುದಿಲ್ಲ.

ಬಡವರ ಜೋಪಡಿ ನೆಲಸಮವಾದ
ನೋವಿನ ಕಥೆ ಕೇಳಿ
ದುಡಿಯುವ ಜನಗಳ ಪ್ರಾಣವು ಹೋದ
ಗೋಳಿನ ಕಥೆ ಕೇಳಿ

ಈ ಸಾಲುಗಳನ್ನು ಗಮನಿಸದರೆ 'ಹೊಲೆ ಮಾದಿಗರ ಹಾಡಿನಲ್ಲಿದ್ದ' ಕುಡಿತೀನಿ ಗಟಗಟನೆ ಹೆಂಡ ಕುಡ್ಡಂಗ ಸಾವ್ಕಾರಿ ರಕ್ತನ' ಎಂಬ ಸಾಲುಗಳನ್ನು ಈ ಕವಿಯೇ ಬರೆದಿರಬಹುದಾ ಅಥವಾ ಅದು ಬೇರೆ ಕವಿಯ ಬರಹವಾ ಅನಿಸುತ್ತದೆ. ಅಲ್ಲಿ ತನ್ನ ಭಾಷೆಯಲ್ಲಿ ಆವೇಶವನ್ನು ತೋರಿಸುವ ಕವಿ ಸ್ವಲ್ಪ ಕಾಲಮಾನದಲ್ಲಿ ತಮ್ಮ ಮನಸ್ಸಿನ ಮಾತುಗಳಲ್ಲಿನ ಲಯತೆಯನ್ನು ಬದಲಾಯಿಸಿರುವುದನ್ನು ಗಮನಿಸಬಹುದು. ಒಂದು ಕಾಲದಲ್ಲಿ 'ರಕ್ತ ಕುಡಿತೀನಿ ನಿಮ್ಮ ಕಳ್ಳುಪಚ್ಚಿ ಎಳಿತೀನಿ ' ಎಂದು ಹೇಳಿದ ಕವಿ ಈಗ ಅಸಹಾಯಕತೆಯ ಧ್ವನಿಯನ್ನು ತೋರುತ್ತಿದ್ದಾರೆ. ಅವರ ಭಾಷೆಯ ಬಳಕೆಯೇ ದಲಿತರನ್ನು ಸ್ವಾಭಿಮಾನದಿಂದ ಹೋರಾಡಲು ಸಿದ್ಧರಾಗಿಸಿ ಮತ್ತೆ ಮೂಲೆಗುಂಪು ಮಾಡಿದೆ ಎನಿಸುತ್ತದೆ. 'ಬಡವರ ಜೋಪಡಿ ನೆಲಸಮವಾದ ನೋವಿನ ಕತೆ ಕೇಳಿ' ಎನ್ನುವ ಕವಿಯ ವಿಷಾದದ ಧ್ವನಿ, ದಲಿತರ ಗೋಳಿನ ಅಸಹಾಯಕತೆಯ ಧ್ವನಿಯಾಗಿ ಮಂಡಿತವಾಗುತ್ತಿದೆ. ಇದು ಈ ಒಂದು ಕವನದಲ್ಲಿರುವುದಕ್ಕಿಂತ ಇಡೀ ಕವನ ಸಂಕಲನದ ಮೂಲ ಭಾವವೇ ಆಗಿದೆ. ಈ ರೀತಿಯ ಭಾಷೆಯ ಬಳಕೆಯನ್ನು ಗಮನಿಸಿದರೆ ಆಕ್ರೋಶ ಸಿಟ್ಟಿನಿಂದ ಕೂಡಿದ್ದ ಕವಿಯ ಮನೋಧರ್ಮ ಈಗ ಮೃದುವಾಗಿರುವುದನ್ನು ಗಮನಿಸಬಹುದಾಗಿದೆ.

## ೧. ಡಾ. ಸಿದ್ಧಲಿಂಗಯ್ಯನವರ ಕಾವ್ಯದಲ್ಲಿ ಕ್ರಾಂತಿಕಾರಿ ಪ್ರತಿರೋಧಗಳು

೭೦ರ ದಶಕದ ಗುಲಾಮಗಿರಿ ಮತ್ತು ಅಂಧಕಾರದಲ್ಲಿ ಬದುಕುತ್ತಿದ್ದ ದಲಿತರು ನೇರವಾಗಿ ಸಮಾಜದಲ್ಲಿನ ಅಸಮಾನತೆಯನ್ನು ಕಡಿದು ಹಾಕಲು ವಿದ್ಯೆ ಮತ್ತು ಬರವಣಿಗೆಯನ್ನೇ ತಮ್ಮ ಆಯುಧಗಳಾಗಿ ಬಳಸತೊಡಗಿದರು. ಮಾರ್ಕ್ಸ್‌ವಾದಿ ಚಿಂತಕರು ಒಂದು ಭಾಗದಲ್ಲಿ ಅವರ ಸಿದ್ಧಾಂತವನ್ನು ತಮ್ಮ ಹೋರಾಟದ ಮೂಲ ಬಂಡವಾಳವಾಗಿಸಿಕೊಂಡರೆ, ಮತ್ತೆ ಕೆಲವು ದಲಿತ ಚಿಂತಕರು ರಾಷ್ಟ್ರನಾಯಕ ಬಾಬಾಸಾಹೇಬ್ ಡಾ. ಅಂಬೇಡ್ಕರ್‌ರವರ ದಲಿತ ವಿಮೋಚನೆಯ ಚಿಂತನೆಗಳನ್ನು ಮತ್ತು ಅವರ ತತ್ವ ಸಿದ್ಧಾಂತಗಳನ್ನು ಮೈಗೂಡಿಸ್ಕಿಹೊಂಡು ಕ್ರಾಂತಿಯ ಕಹಳೆಯನ್ನು ಮೊಳಗಿಸಲು ಮುಂದಾದರು.

೭೦ರ ದಶಕದಲ್ಲಿ ಹೊಸ ಪ್ರಜ್ಞಾವಂತ ಜನಾಂಗವಾಗಿ ರೂಪುಗೊಳ್ಳಲು ಸಿದ್ಧಲಿಂಗಯ್ಯನವರ ಕವಿತೆಗಳು ಸಹಾಯಕವಾದವು. ಇದುವರೆಗೂ ದಲಿತರ ಮೇಲೆ ನಡೆಯುತ್ತಿದ್ದಂತಹ ದೌರ್ಜನ್ಯಗಳು, ಅಸ್ಪೃಶ್ಯತಾ ಆಚರಣೆ, ಕಠೋರ ಜಾತಿವ್ಯವಸ್ಥೆ, ಧರ್ಮದ ಹೆಸರಿನಲ್ಲಿ ಅವಮಾನ, ಹೆಣ್ಣಿನ ಮೇಲೆ ಕಿಡಿಗೇಡಿಗಳ ನಿರಂತರ ದಾಳಿ ಎಲ್ಲವೂ ಸ್ವಾತಂತ್ರ್ಯ ನಂತರದ ಭಾರತದಲ್ಲಿಯೂ ಮುಂದುವರಿಯುತ್ತಲೇ ಬಂದವು. ಇಂತಹ ವ್ಯವಸ್ಥೆಯ ವಿರುದ್ಧ ಕ್ರಾಂತಿಕಾರಿ ಮನೋಭಾವಗಳು ದಲಿತರಲ್ಲಿ ಸೃಷ್ಟಿಯಾಗುವಂತೆ ಮೊದಲ ವಿದ್ಯಾವಂತ ತಲೆಮಾರಿನ ದಲಿತ ಬರಹಗಾರರು ಸಾಹಿತ್ಯ ಬರೆಯತೊಡಗಿದರು. ಡಾ. ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ದೇವಯ್ಯ ಹರವೆ, ಪ್ರೊ॥ ಬಿ.ಕೃಷ್ಣಪ್ಪ, ಬಿ. ಬಸವಲಿಂಗಪ್ಪನವರಂತಹ ಕವಿಗಳು ರಾಜಕಾರಣಿಗಳು ದಲಿತರ ಬದುಕನ್ನು ಅನಾವರಣ ಗೊಳಿಸತೊಡಗಿದರು. ಬಿ. ಬಸವಲಿಂಗಪ್ಪನವರ ದಲಿತಪರ ಚಿಂತನೆಗಳು ನಾಡಿನಾದ್ಯಂತ ಕ್ರಾಂತಿಯ ಕಿಚ್ಚನ್ನು ಹಚ್ಚಿದರೆ ಅದಕ್ಕೆ ಪೂರಕವೆಂಬಂತೆ ಸಿದ್ಧಲಿಂಗಯ್ಯನವರ ಕಾವ್ಯದ ಬರವಣಿಗೆ ದಲಿತರದೇ ಆದ ಭಾಷೆಯ ಜೊತೆಗೆ, ಗುಲಾಮರಂತೆ ಬದುಕುತ್ತಿದ್ದ ದಲಿತರು ವ್ಯವಸ್ಥೆಯ ವಿರುದ್ಧ ಬಂಡೇಳುವ, ಪ್ರತಿಭಟಿಸುವ ಕ್ರಾಂತಿಕಾರಿ ಪ್ರತಿರೋಧಗಳು ಕಾಣುತ್ತವೆ ಎಂಬುದು ಅತೀ ಮುಖ್ಯವಾದ ಚರ್ಚಾವಿಷಯವಾಗಿದೆ.

ಸಿದ್ಧಲಿಂಗಯ್ಯ ಎಂದರೆ ದಲಿತರು - ದಲಿತರೆಂದರೆ ಹೊಸ ಬದುಕಿಗಾಗಿ ಹವಣಿಸುತ್ತಿರುವ ಕ್ರಾಂತಿಕಾರಿ ಮನಸುಗಳು ಎನ್ನುವಂತೆ ಗೋಚರಿಸುತ್ತದೆ. ಶತಶತಮಾನಗಳಿಂದಲೂ ತುಳಿತಕ್ಕೊಳಗಾಗಿ ನೋವುಂಡವರು ೭೦ರ ದಶಕದಲ್ಲಿ ಕ್ರಾಂತಿಯ ಕಿಡಿಗಳಾಗಿ ಹೊರಹೊಮ್ಮಲು ಮತ್ತು ಸಿದ್ಧಮಾದರಿಯಂತಿದ್ದ ಮನುವಾದಿ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ ಎಂದರೆ ಅದು ಸಿದ್ಧಲಿಂಗಯ್ಯನವರ ಕಾವ್ಯದ ಭಾಷೆ ಮತ್ತು ಅದರ ಮಂಡನಾ ಕ್ರಮ ಕ್ರಾಂತಿಕಾರಕ ಅಂಶಗಳು ಅತೀ ಮುಖ್ಯವೆನಿಸುತ್ತವೆ. ನೊಂದವರ ಆಕ್ರಂದನವನ್ನು ಹಾಡಾಗಿಸಿ ಕಾವ್ಯದ ನಾಡಿ ಬಡಿತಕ್ಕೆ ಹೊಸ ಬಗೆಯ ನಾದವನ್ನು ತುಂಬಿದವರು ಇವರು. ಇವರ ಕಾವ್ಯಗಳು ಕೇವಲ ಸಿಟ್ಟು, ದ್ವೇಷ, ಹಿಂಸೆಯ ಪ್ರತೀಕವೆಂದು ತಿಳಿಯದೆ ಇದರೊಟ್ಟಿಗೆ ಪ್ರೀತಿ ವಿಶ್ವಾಸಗಳು ಮಿಳಿತಗೊಂಡಿವೆ ಎನ್ನಬಹುದು. ಹಾಗಾಗಿ ಇವರ ಕಾವ್ಯಗಳು ಬದುಕಿನಲ್ಲಿ ಹತಾಶೆಗೊಂಡವರ ಆಕ್ರಂದನದ ಕೂಗಾಗಿದೆ.

ದಲಿತ ಕವಿಯ ಬರಹಗಳು ದಲಿತರ ಬದುಕಿನ ನೈಜ ಚಿತ್ರಣವನ್ನೇ ಬಿಂಬಿಸಿರುವುದರಿಂದ ಇವುಗಳನ್ನು ಇಡೀ ಸಮುದಾಯದ ದಲಿತರ ಆತ್ಮಕಥೆಗಳು ಎಂದು ಕರೆಯಬಹುದು.[13] ಕವಿಯ ಮೊದಲ ಸಂಕಲನವಾದ' 'ಹೊಲೆ ಮಾದಿಗರ ಹಾಡು' ಅದುವರೆಗೂ ನಿರ್ಲಕ್ಷಿಸಲ್ಪಟ್ಟು ಜನಾಂಗದ ಪ್ರತಿಭಟನೆಯ ಅಸ್ತ್ರವಾಗಿ ಕಾಣತೊಡಗಿತು.

ಕ್ವರುಗ್ತೀನಿ ಕ್ವನಿಗೊಂದ್ಸಲ ಕೂಗ್ತೀನಿ

......................................

ಕೂಗ್ತೀನಿ ಸಿಡಿತೀನಿ ಮನುಷ ಆಯ್ತೀನಿ (ಒಂದು ಮೂಳೆ ಹಾಡು)

ಇಲ್ಲಿನ ಭಾಷೆಯ ಬಳಕೆಯು ಇದುವರೆಗೂ ರಚಿತವಾಗಿದ್ದ ಭಾಷೆಗಿಂತ ಭಿನ್ನವಾಗಿರುವುದರ ಜೊತೆಗೆ ಅದುವರೆಗೂ ದಲಿತರು ಮೇಲುವರ್ಗದವರು ನೀಡಿದ ಹಿಂಸೆಯನ್ನು ಸಹಿಸಿಕೊಂಡು ಬದುಕಿದ ಸ್ಥಿತಿಯನ್ನು ತೋರುತ್ತದೆ ಮತ್ತು ಕೊನೆಗೊಂದ್ಸಲ ಕೂಗ್ತೀನಿ, ಸಿಡಿತೀನಿ ಎನ್ನುವ ಮಾತು ಅದುವರೆವಿಗೂ ಇದ್ದ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ವ್ಯಕ್ತಪಡಿಸುವ ದಲಿತರನ್ನು ಕ್ರಾಂತಿಯ ಕಡೆಗೆ ಕರೆತರುವುದಾಗಿದೆ.

ಇಕ್ರ್ಲಾ ವದೀರ್ಲಾ
ಈ ನನ್‌ಮಕ್ಕಳ ಚರ್ಮ ಎಬ್ರ್ಲಾ
ಎಲ್ಲಾರು ದೇವ್ರ ಮಕ್ಳು ಅಂತಾರೆ
ಹೊಲೇರ್ನ ಕಂಡ್ರೆ ಹಾವ್ ಕಂಡಂಗಾಡ್ತಾರೆ
ಇಕ್ರ್ಲಾ ವದೀರ್ಲಾ ಈ ಸೂಳೆ ಮಕ್ಳ ಮೂಳೆ ಮುರೀರ್ಲಾ ( ಒಂದು ಪದ)

ದಲಿತರನ್ನು ಇದುವರೆಗೂ ಧರ್ಮದ ಹೆಸರಿನಲ್ಲಿ ವಂಚಿಸಿ ಅವರನ್ನು ವೈಜ್ಞಾನಿಕತೆಯ ಕಡೆಗೆ ಮುಖಮಾಡಿ ನಿಲ್ಲದಂತೆ ಮಾಡಿ, ಜಾತೀಯತೆಯನ್ನು ಆಚರಿಸುತ್ತಿರುವ, ಶೋಷಿಸುತ್ತಿರುವ ಮೇಲುಜಾತಿಯ ಜನರ ವಿರುದ್ಧ ಇಡೀ ದಲಿತ ಜನಾಂಗವನ್ನೇ ಕ್ರಾಂತಿಯ ರಂಗಕ್ಕೆ ಕರೆತರುವುದಾಗಿದೆ ಮತ್ತು ಜಾತಿ ವ್ಯವಸ್ಥೆಯ್ನು ವಿರೋಧಿಸಿದಂತಹ ಪ್ರತಿಭಟನೆಯಾಗಿದೆ.

ಗುಡಿಸಲುಗಳು ಗುಡುಗುತಿವೆ ಬಂಗಲೆಗಳು ನಡುಗುತಿವೆ
ಎಲ್ಲೆಲ್ಲಿಯೂ ಮೊಳಗುತಿದೆ ನವಕ್ರಾಂತಿಯ ಗಾನ (ಕ್ರಾಂತಿಪದ)

ಜಾತೀವ್ಯವಸ್ಥೆಯ ಸುಳಿಗೆ ಸಿಕ್ಕಿ ಶತಮಾನಗಳಿಂದಲೂ ಊರಿನ ಹೊರಗೆ ಜೋಪಡಿಗಳಲ್ಲಿ ಬದುಕನ್ನು ಸವೆಸುತ್ತಿದ್ದ ದಲಿತರು ಇಂದು ಕ್ರಾಂತಿಯ ಕಿಡಿಗಳಾಗಿ, ಹೊರಹೊಮ್ಮುತ್ತಿರುವ ಕಾರಣದಿಂದ ಅವರ ಶ್ರಮದ ಬೆವರಿನಿಂದ ಮೂಡಿದ ಅರಮನೆಗಳು ಅಲುಗಾಡುವ ಸ್ಥಿತಿ ನಿರ್ಮಾಣಗೊಂಡಿದೆ. ಅಂದರೆ ದಲಿತರ ಮೇಲೆ ಸವಾರಿ ಮಾಡುತ್ತಿದ್ದ ಸಾಹುಕಾರನ ಗುಂಡಿಗೆಯನ್ನು ಮೆಟ್ಟಿನಿಲ್ಲುವಂತೆ ಕ್ರಾಂತಿ ಪಥಕೆ ಆಹ್ವಾನಿಸುವ ಈ ಸಾಲುಗಳು ಉಳ್ಳವರ ವಿರುದ್ಧ ಇಲ್ಲದವರು ನಡೆಸುತ್ತಿರುವ ಕ್ರಾಂತಿಯಾಗಿದೆ.

ಸುಲಿದವರನು ಸುಲಿವದಿನ ಬಂದಿತೆಂದು ಹಿಗ್ಗುತಿದೆ
ಸುಡುಗಾಡಿನ ಬಿರುಗಾಳಿಯು ಕ್ರಾಂತಿಗೀತೆ ಹಾಡಿ (ಕ್ರಾಂತಿಪದ)

ದಲಿತರ ಶ್ರಮವನ್ನೇ ಬಂಡವಾಳವಾಗಿಸಿಕೊಂಡ ತಮ್ಮ ಬದುಕನ್ನು ಮೋಜಿನಿಂದ ಕಳೆಯುತ್ತಿದ್ದ ಸಾಹುಕಾರರನ್ನು ದಂಡಿಸುವ ಹೊಸ ಯುಗ ನಿರ್ಮಾಣವಾಗುತ್ತಿದೆ ಹಾಗಾಗಿ ದಲಿತರು ಬಿರುಗಾಳಿಯಂತೆ ಕ್ರಾಂತಿಪಥಕ್ಕೆ ಮುನ್ನುಗ್ಗಬೇಕೆಂದು ಕವಿ ಬಯಸುತ್ತಾರೆ.

ಸುಲ್ಗೆ ಮಾಡೋರು ಮೋಸಗಾರ
ಬಡ್ಡಿಮಕ್ಕಳ್ನ ಕ್ರಾಂತಿಕಾರಿಗಳ ಕೋರ್ಟಿಗೆಳೀತೀನಿ
ಮಾರ್ಕ್ಸ್ ನಿಂದ ಜಡ್ಜ್‌ಮೆಂಟ್ ಕೊಡುಸ್ತೀನಿ (ಹಬ್ಬ)

ಮಾರ್ಕ್ಸ್‌ವಾದಿ ಚಿಂತನೆಯ ನೆಲೆಯಿಂದ ಬರೆಯುತ್ತಿರುವ ಕವಿಯು ಮಾರ್ಕ್ಸ್‌ನ ಸಿದ್ಧಾಂತವನ್ನೇ ತಮ್ಮ ಹೋರಾಟದ ಮೂಲ ಮಂತ್ರವಾಗಿಟ್ಟುಕೊಂಡು ದಲಿತರು ಹೋರಾಟಕ್ಕಿಳಿಯಬೇಕು. ಅದರಿಂದಲೇ ಸಮತಾ ಸಮಾಜ ಸಾಧ್ಯವೆನ್ನುತ್ತಾರೆ. ಇದುವರೆಗೂ ಶ್ರಮಿಕರ ಶ್ರಮವನ್ನು ಸುಲಿದು ಶ್ರಮದ ಪ್ರತಿಫಲವನ್ನು ತನ್ನದಾಗಿಸಿಕೊಂಡಿರುವವರ ವಿರುದ್ಧ ಕವಿಯು ಕ್ರಾಂತಿಯ ಸಮರವನ್ನೇ ಸಾರುತ್ತಿದ್ದಾರೆ.

ಕಾರ್ಮೋಡ ಕವಿದಿತ್ತು ಕಗ್ಗಪ್ಪು ಕೆದರಿತ್ತು
ಕಡುರೌದ್ರ ತುಂಬಿತ್ತು ಬಾನಿನಲ್ಲಿ (ಭವಿಷದ್ಗೀತೆ)

ದಲಿತರ ಬದುಕಿನಲ್ಲಿ ಇದ್ದ ಮೂಢನಂಬಿಕೆಯೆಂಬ ಅಂಧಕಾರದ ಕಾರ್ಮೋಡ ಸ್ಫೋಟಗೊಳ್ಳುವ ರೀತಿಯಲ್ಲಿ ದಲಿತ ಸಮುದಾಯವೇ ಕ್ರಾಂತಿ ರಂಗಕ್ಕೆ ಬಂದು ಸೇರ್ಪಡೆಯಾಗಲು ಆಹ್ವಾನವನ್ನು ನೀಡುತ್ತಿದೆ.

ನ್ಯಡೀತಿರೋ ಅನ್ಯಾಯ ತಡೆಯಾಕೆ
ದುಪ್ಪಿ ಎಸ್ದು ಎಗರ್‌ಬೇಕು
.........................
ಏರು ಪೇರೂ ನ್ಯಾರಾ ಮಾಡಿ
ಬಾಡ್ ತಿಂದಂಗ್ ನಗ್ಬೇಕು (ನಗ್ಬೇಕು)

ಈ ಕವಿತೆಯಲ್ಲಿ ಮನುವಾದಿ ಸಾಮಾಜಿಕ ವ್ಯವಸ್ಥೆಯಲ್ಲಿ ಇದುವರೆಗೂ ದಲಿತರಿಗೆ ಆಗಿದ್ದಂತಹ ಅನ್ಯಾಯ, ಶೋಷಣೆ, ಅಪಮಾನ, ಹಂದಿ ನಾಯಿಗಳಿಗಿಂತಲೂ ಕೀಳಾಗಿ ಕಾಣುತ್ತಿದ್ದ ಮೇಲು ವರ್ಗದವರ ಅಸಮಾನತೆಯ, ಅನ್ಯಾಯದ ಮನಸ್ಥಿತಿಯ ವಿರುದ್ಧ ಕವಿ ಇಡೀ ದಲಿತ ಸಮುದಾಯವನ್ನೇ ಎತ್ತಿ ಕಟ್ಟುವ ಕಾರ್ಯ ಮಾಡಿದ್ದಾರೆ. ದಲಿತರು ಎಲ್ಲರ ಹಾಗೆ ಸರಿಸಮಾನರು ಎಂದು ಸಾರುತ್ತಾ ಸಮಾನತೆಯ ಬದುಕಿಗಾಗಿ ಎಲ್ಲರೂ ತಮ್ಮ ಮನಸ್ಸಿನ ಗುಲಾಮಗಿರಿಯ ಸಂಕೋಲೆಯನ್ನು ಕಡಿದೊಗೆದು ಕ್ರಾಂತಿಮನೋಭಾವ ತಾಳಿ ಹೋರಾಟಕ್ಕೆ ಸನ್ನದ್ಧರಾಗಬೇಕು ಎಂದು ಸಾರುತ್ತಾರೆ.

ಉಮ್ಮಳವನದುಮಿಟ್ಟ ನೀರಿಲ್ಲದಾ ನೋಟ
ಬಾಳುವೆಗೆ ಧಿಕ್ಕಾರ ಎನ್ನುತ್ತಿತ್ತು (ಬೀಳು)

ದಲಿತರ ಸಂತೋಷ ಸಡಗರ ಅವರ ಬದುಕಿನ ಶೈಲಿಯನ್ನೇ ಅವರ ಆಸೆ ಆಕಾಂಕ್ಷೆ, ಉಡುಗೆ, ಊಟವನ್ನೇ ಕಿತ್ತುಕೊಂಡು ಕೇವಲ ಬೇರೆಯವರ ಆಜ್ಞೆಗೆ ತಲೆಯಾಡಿಸುವ ಉಸಿರಾಡುವ ಬೊಂಬೆಗಳಾಗಿ ಮಾಡಿದ್ದ ಸಾ॥ ಅಸಮಾನತೆಯ ವ್ಯವಸ್ಥೆಗೆ ಕವಿಯು ಧಿಕ್ಕಾರವನ್ನು ಸೂಚಿಸಿ, ಅದನ್ನು ವಿರೋಧಿಸಿ ಹೊಸ ಬದುಕಿನತ್ತ ಇಡೀ ದಲಿತ ಸಮುದಾಯವನ್ನೇ ಕ್ರಾಂತಿಯ ಮಾರ್ಗಕ್ಕೆ ಕರೆದೊಯ್ಯುವ ಕರೆಯನ್ನು ನೀಡುತ್ತಿದ್ದಾರೆ.

ಕೂಳಿಲ್ಲದೆ ಕೊರಗುವವರು
ನಾವು ಹಸಿದ ಹುಲಿಗಳು
ಮೇಲಿವರ ಸುಳ್ಳು ಸುಲಿದು
ನೆಗೆಯಲಿರುವ ಕಲಿಗಳು
ಉಪದೇಶವು ನಮಗೆ ಬೇಡ
ಬೇಕು ನಮಗೆ ಅನ್ನವು
ಗುರುವುಗಿರುವು ನಮಗೆ ಬೇಡ
ಬೇಕು ವಸತಿ ವಸನವು (ನಾವು)

ಬ್ರಾಹ್ಮಣೇತರ ಚಳುವಳಿಯ ನಾಯಕರಾದ ಈ.ವಿ. ರಾಮಸ್ವಾಮಿನಾಯ್ಕರ್ (ಪೆರಿಯಾರ್) ರವರ ಮಾತಿನಂತೆ 'ದೇವರು ದಿಂಡಿರು ಸುಳ್ಳು ಶಾಸ್ತ್ರಪುರಾಣ ಪೊಳ್ಳು' ಎಂಬಂತೆ ದಲಿತರಿಗೆ ಈ ಧರ್ಮದ ಉಪದೇಶದ ಅಗತ್ಯವೂ ಇಲ್ಲ. ಮಾನವರನ್ನು ಮಾನವರಂತೆ ಕಾಣದ ಧರ್ಮ ಒಂದು ಧರ್ಮವೇ? ಮೌಲ್ಯಗಳಿಲ್ಲದ ಉಪದೇಶಗಳು ನಮಗೆ ಬೇಡ, ನಮಗೆ ಬೇಕಾಗಿರುವುದು ಬದುಕಲು ಅಗತ್ಯವಾದ ಪರಿಕರಗಳು ಮಾತ್ರ ಎನ್ನುವಂತೆ ಧಾರ್ಮಿಕ ಸಂಸ್ಕೃತಿಗೆ ಪ್ರತಿರೋಧವನ್ನು ಒಡ್ಡುತ್ತಿದ್ದಾರೆ. ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿರುವ ದಲಿತರು ಹಸಿದ ಹುಲಿಗಳಾಗಿ ಮುಂದೆ ನುಗ್ಗಿ ಅವುಗಳನ್ನು ಪಡೆಯುವಲ್ಲಿ ಯಶಸ್ವಿಯಾಗಬೇಕು.

ಇರುವೆಯಂತೆ ಹರಿವಸಾಲು ಹುಲಿಸಿಂಹದ ದನಿಗಳು
ಧಿಕ್ಕಾರ ಧಿಕ್ಕಾರ ಅಸಮಾನತೆಗೆ
ಎಂದೆಂದಿಗೂ ಧಿಕ್ಕಾರ ಶ್ರೀಮಂತರ ಸೊಕ್ಕಿಗೆ (ಸಾವಿರಾರು ನದಿಗಳು)

ಶ್ರೀಮಂತರ ಮನೆಯ ಜೀತದಾಳುಗಳಾಗಿ ಶ್ರಮವಹಿಸಿ ದುಡಿಯುವ ದಲಿತರನ್ನು ಕವಿಯು ತನ್ನ ಬರಹದ ಮೂಲಕ ಕ್ರಾಂತಿಯ ಕಣಕ್ಕೆ ಇಳಿಸುತ್ತಿದ್ದಾರೆ. ಅಸಮಾನತೆಗೊಳಗಾದ ಎಲ್ಲಾ ಜನರು ಇರುವೆಯ ಹಿಂಡಿನಂತೆ ಒಂದಾಗಿದ್ದಾರೆ. ಸಾಮಾಜಿಕವಾಗಿ ನಡೆದಿರುವ ಅನ್ಯಾಯ ಅಕ್ರಮಗಳ್ನು ಖಂಡಿಸಿ ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸುವ ಕ್ರಿಯೆಗೆ ಸಜ್ಜುಗೊಳಿಸುವಂತಹುದನ್ನು ನೋಡಬಹುದಾಗಿದೆ.

ಇವರು ಬಾಯಿ ಬಿಟ್ಟೊಡನೆ
ಅವರ ಬಾಯಿ ಕಚ್ಚಿತು
ಇವರ ಕಂಠ ಕೇಳಿದೊಡನೆ
ಅವರ ದನಿ ಇಂಗಿತು ( ಸಾವಿರಾರು ನದಿಗಳು)

''ದಲಿತರು ದನಿಯನ್ನು ಬಿಚ್ಚಿದೊಡನೆ ಶ್ರೀಮಂತರ ಬಾಯಿ ಕಟ್ಟುವುದನ್ನು, ಅವರ ಎದೆ ಬಡಿದುಕೊಳ್ಳುವುದನ್ನು ಸಾರುತ್ತದೆ. ದಲಿತರ ರೋಷದ ಕಂಠ ಕೇಳಿದೊನಡೆ ಅವರ ದನಿ ಇಂಗುತ್ತದೆ. ಅವರ ಕುತ್ತಿಗೆ ಹಿಡಿದರೆ ಮಾಲೀಕರ ಸೊಕ್ಕು ಅಡಗುತ್ತದೆ'' ಎಂಬ ಸಂದೇಶವನ್ನು ಕವಿ ಮಾಲೀಕರ ವಿರುದ್ಧ ಪ್ರತಿರೋಧ ತೋರುತ್ತಾ ಇಡೀ ದಲಿತ ಸಮುದಾವನ್ನು ಒಗ್ಗೂಡಿಸುತ್ತಿದ್ದಾರೆ.

ಎಲ್ಲಿದ್ದರೋ ಅವರು ಯಂಗಿದ್ದರೋ ಅವರು
ಎಚ್ಚೆತ್ತ ಸಿಂಹಗಳು ನನ್ನ ಜನರು........
ಯಾವ ಮಾಯದ ನಿದ್ದೆ ಕವಿದಿತ್ತು ಇವರನ್ನು
ಯಾವ ಉಕ್ಕಿನ ಸರಳು ಬಿಗಿದಿತ್ತು ಇವರ
ಯಾವ ಬಣ್ಣದ ಬೀಗ ಮುಚ್ಚಿತು ಬಾಯನ್ನು
ಯಾವ ಮೋಡದ ಹಿಂದು ದಡೆದಿತ್ತು ಬೆಳಕ (ಕೆಂಪು ಸೂರ್ಯ)

ದಲಿತರು ಬದುಕಿನಲ್ಲಿ ಹೊಸ ಬದಲಾವಣೆಯನ್ನು ಕಾಣುವ ಸಲುವಾಗಿ ಕರಾಳ ಛಾಯೆಗೆ ನೂಕಿದಂತಹ ವ್ಯವಸ್ಥೆಯ ವಿರುದ್ಧ ತಮ್ಮ ಪ್ರತಿರೋಧವನ್ನು ಒಡ್ಡುತ್ತಿದ್ದಾರೆ. ಇದು ಇವರ ಬಿಡುಗಡೆಯ ಬದುಕಿನ ರೂಪವಾಗಿಯೂ, ಕ್ರಾಂತಿಯ ಕಹಳೆಯಾಗಿಯೂ ಮೊಳಗಬೇಕು ಎನ್ನುತ್ತಾರೆ. ಕೆಂಪುಸೂರ್ಯ ಎನ್ನುವ ಕವನದ ಶೀರ್ಷಿಕೆಯೇ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ಒಡ್ಡುವುದರ ಸಂಕೇತವಾಗಿದೆ.

ದಲಿತರು ಬರುವರು ದಾರಿ ಬಿಡಿ
ದಲಿತರ ಕೈಗೆ ರಾಜ್ಯಕೊಡಿ...........
ದೇವರು ಗುರುಗಳ ತಿಪ್ಪೆಗೆ ತಳ್ಳಿ
ಮಂತ್ರಿ ಶಾಸಕರ ಮೋರಿಗೆ ನೂಕಿ
ತಾವೇ ಕಂಡ ಹೊಸ ದಾರಿಯಲಿ
ಹೊಂಟರು ದಲಿತರು ಮೆರವಣಿಗೆ (ದಲಿತರು ಬರುವರು)

ದೇವರು ದಿಂಡಿರು, ಗುರುಗಳ ಉಪದೇಶ, ಯಾವುದೋ ಕಾಣದ ಅಶರೀರವಾಣಿ, ಅದರಿಂದ ದಲಿತರ ಮೋಕ್ಷ ಎನ್ನುತ್ತಾ ದಲಿತರ ಜನಾಂಗವನ್ನೇ ನಂಬಿಸಿ ಮೋಸ ಮಾಡುತ್ತಿದ್ದ ಪುರೋಹಿತಶಾಹಿ ವ್ಯವಸ್ಥೆಯನ್ನು ತೆಗಳುತ್ತಾ, ರಾಜಕೀಯ ಪುಡಾರಿಗಳು ದಲಿತರ ಉದ್ಧಾರದ ಬಗ್ಗೆ ಬಿಗಿದ ಭಾಷಣಗಳಿಂದ ಬೇಸತ್ತು, ಅಂತಹ ರಾಜಕೀಯ ವ್ಯವಸ್ಥೆಗೆ ಸೆಡ್ಡುಹೊಡೆಯುತ್ತಾ, ತಮ್ಮದೇ ಬದುಕಿನ ಭರವಸೆಯ ದಾರಿಯಲ್ಲಿ ಸಾಗುತ್ತಿದ್ದಾರೆ. ಅಲ್ಲಿ ದಲಿತರಿಗೆ ಅವರದೇ ಆದ ಸಂಸ್ಕೃತಿ ಸದಾಚಾರಗಳಿವೆ. ದಲಿತರು ರಾಜಕೀಯ ರಂಗವನ್ನು ಪ್ರವೇಶಿಸಿದರೆ ಈ ದೇಶವನ್ನು ತುಂಬಾ ಸುಭಿಕ್ಷೆಯಿಂದ ಆಳಬಲ್ಲರು ಸಾಮಾಜಿಕ ಮತ್ತು ರಾಜಕೀಯ ತಂತ್ರಗಾರಿಕೆಗೆ ದಲಿತರು ಪ್ರತಿತಂತ್ರವನ್ನು ಹೂಡಬಲ್ಲರು ಎಂಬುದನ್ನು ತೋರಿಸುತ್ತಾರೆ.

ಉರಿಯುತ್ತಿರುವ ಪಂಜುಕೈಯಲ್ಲಿ
ಕ್ರಾಂತಿಯ ಕಿಡಿಗಳು ಕಣ್ಣುಗಳಲ್ಲಿ
ಸಿಡಿದರು ಕೆಂಡದ ಉಂಡೆಗಳು (ದಲಿತರು ಬರುವರು)

ದಲಿತರು ತಮ್ಮ ಮನದಾಳದಲ್ಲಿ ಅಡಗಿದ್ದ ಆಕ್ರೋಶ, ಸಿಟ್ಟು, ಅಸಮಾನತೆಯ ವ್ಯವಸ್ಥೆಯನ್ನು ಸರಿಪಡಿಲು ತಳೆದಿರುವ ಕ್ರಾಂತಿಯ ಧೋರಣೆ, ಅವರು ಮಾತನಾಡಿದರೆ ಬಂದೂಕಿನ ಬಾಯಿಂದ ಬರುವ ಗುಂಡಿನಂತಹ ತೀಕ್ಷ್ಣವಾದ ರೋಷ ಆವೇಶದ ಪದಗಳು ದಲಿತರು ಮಾಲೀಕರ ಮತ್ತು ಜಮೀನುದಾರಿ ಪದ್ಧತಿಯ ವಿರುದ್ಧ ಸಾರುತ್ತಿರುವ ಕ್ರಾಂತಿಕಾರಿ ಮನೋಭಾವವನ್ನು ತೋರುತ್ತದೆ.

ಕುಂತ ಮನಗಳೆ
ನಿಂತ ಜನಗಳೆ
ಕೇಳದೆ ಹೊಸನುಡಿ
ಕಾಣದೆ ಕೆಂಗಿಡಿ (ಹೋರಾಟದ ದಾರಿ)

ಹೋರಾಟದ ದಾರಿ ಎನ್ನುವುದೇ ಒಂದು ರೀತಿಯಲ್ಲಿ ಪ್ರತಿರೋಧವನ್ನು ವ್ಯಕ್ತಪಡಿಸುವಂತಹುದಾಗಿದೆ. ಇದುವರೆಗೂ ಅಸಹಾಯಕರಾಗಿ ಕತ್ತಲೆಯ ಕರಿನೆರಳಿನ ಛಾಯೆಯಲ್ಲಿ ಕುಳಿತಿರುವ ಜನರಿಗೆ ಹೊಸ ಬದುಕಿನ ಭರವಸೆಯ ಹುರುಪಿನ ಮಾತುಗಳನ್ನು ಹೇಳುತ್ತಾ, ಯಜಮಾನ್ಯ ಸಂಸ್ಕೃತಿಗೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾ ಇಡೀ ದಲಿತ ಸಮುದಾವನ್ನೇ ಕ್ರಾಂತಿಯ ರಣರಂಗಕ್ಕೆ ಇಳಿಸುವ ಕಾರ್ಯ ನಡೆದಿರುವುದಾಗಿದೆ.

ದಲಿತ ಕವಿ ತನ್ನ ಕಾವ್ಯದ ಪ್ರತೀ ಸಾಲಿನಲ್ಲಿಯೂ ಕ್ರಾಂತಿಯಿಂದ ಇಡೀ ಸಮಾಜದಲ್ಲಿ ಶೋಷಣೆಗೊಳಗಾದ ಜವನಾಂಗವನ್ನು ಒಂದು ಚೌಕಟ್ಟಿನಡಿಯಲ್ಲಿ ಸೇರಿಸುವ ಅವರಲ್ಲಿ ಹೋರಾಟದ ಮನೋಭಾವವನ್ನು ತುಂಬುವ ಅಂಶಗಳನ್ನು ಕಾಣಬಹುದಾಗಿದೆ. ಅವರ ಮೆರವಣಿಗೆ ಬಂದಿರುವರು ಹುಲಿಗಳಾಗಿ, 'ಅಲ್ಲೆ ಕುಂತವರೆ', ಎನ್ನುವ ಎಲ್ಲಾ ಕವನಗಳು ಶೋಷಣೆಗೊಳಗಾಗಿ ಬದುಕುತ್ತಿದ್ದವರಿಗೆ ಎಚ್ಚರಗೊಳ್ಳಿ ಎಂಬ ಕರೆಕೊಡುತ್ತಿದ್ದಾರೆ ಎನಿಸುತ್ತದೆ.

ಹೀಗೆ ಮೆರವಣಿಗೆಯಲ್ಲಿ ಹೊರಟಿರುವಂತಹ ಪ್ರತಿಭಟನಾಕಾರರು ಕೇವಲ ವ್ಯಕ್ತಿಗಳಾಗಿ ಹೊರಡದೆ ಹಸಿದ ಹೆಬ್ಬುಲಿಗಳಾಗಿದ್ದಾರೆ. ಅಟ್ಟಹಾಸದಿಂದ ಮೆರೆಯುತ್ತಿದ್ದವರ ಪಾಲಿಗೆ ಹುಲಿಯಂತೆ ಗರ್ಜಿಸುತ್ತಾ ಹೊರಟ ಮೆರವಣಿಗೆಯಾಗಿದೆ. ಹಾಗೆಯೇ 'ಅಲ್ಲೇ ಕುಂತವರೆ' ಕವಿತೆಯಲ್ಲಿ ಬರುವಂತಹ ಧಿಕ್ಕಾರ, ಧಿಕ್ಕಾರ ಎಂಬ ಘೋಷಣೆಯ ಮಾತುಗಳು, ಏನಿದೇನು ಚೀರಾಟ, ಏನಿದೇನು ಹೋರಾಟ, ಎನ್ನುವ ಸಾಲುಗಳು ಸಹ ಕವಿಯ ಮನಸ್ಸು ತನ್ನ ಸಮುದಾಯ ಎಷ್ಟು ಯಾತನೆಯನ್ನು ಅನುಭವಿಸಿಕೊಂಡು ಬಂದಿತ್ತು ಎಂಬುದನ್ನು ತೋರುತ್ತದೆ. ಧಿಕ್ಕಾರ, ಚೀರಾಟ, ಹೋರಾಟ, ಎಲ್ಲವುಗಳು ರಾಜಕೀಯ ಪುಡಾರಿಗಳು ಸೃಷ್ಟಿಸಿಕೊಂಡಿರುವ ಶೋಷಣೆಯ ಪೊರೆಯ ವಿರುದ್ಧದ ಮಾತುಗಳಾಗಿ ಮರುಕಳಿಸುತ್ತಿವೆ.

ಕವಿಯು ತನ್ನ ಮೊದಲನೆ ಕವನ ಸಂಕಲನವನ್ನು ಬರೆಯುವಾಗ ಬಳಸಿದ ತೀಕ್ಷ್ಣವಾದ ಭಾಷೆ, ಹರಿತವಾದ ನುಡಿಯ ಬಳಕೆ ಅವರ ಹುಮ್ಮಸ್ಸು ಮತ್ತು ಅವರ ಕ್ರಾಂತಿಕಾರಿ ಮನೋಭಾವಗಳು ಮತ್ತು ಜಡ್ಡು ಹಿಡಿದು ಕೊಳೆತು ನಾರುತ್ತಿರುವಂತಹ ಜಾತಿ ವ್ಯವಸ್ಥೆಗೆ ತೋರಿದ ಪ್ರತಿಕ್ರಿಯೆಗಳು ಮತ್ತು ಪ್ರತಿರೋಧಗಳಾಗಿದ್ದವು. ಹಾಗೆಯೇ ತಮ್ಮ ಎರಡನೇ ಕವನ ಸಂಕಲನವನ್ನು ಬರೆದಂತಹ ಸಂದರ್ಭದಲ್ಲಿ ಕವಿಯ ತನ್ನ ಕ್ರಾಂತಿಕಾರಿ ಮನೋಭಾವ ಮತ್ತಷ್ಟು ವಿಸ್ತಾರತೆಯನ್ನು ಪಡೆದುಕೊಳ್ಳತೊಡಗಿತು. ಮೊದಲು ಕೇವಲ ದಲಿತರ, ಅವರ ಅಸಹಾಯಕ ಬದುಕಿನ ಬಗೆಗೆ ಇದ್ದ ಕಾಳಜಿ ಎರಡನೇ ಸಂಕಲನದ ಹೊತ್ತಿಗೆ ರೈತರ ಮತ್ತು ಕಾರ್ಮಿಕರ ಕಡೆಗೂ ಹರಿಯಿತು. ಇದರಿಂದ ಇವರ ಕ್ರಾಂತಿಕಾರಿ ಚಿಂತನೆಗೆ ಒಂದು ರೀತಿಯಲ್ಲಿ ಇನ್ನಷ್ಟು ಇಂಬು ಬಂದಂತಾಯಿತು. ಇಲ್ಲಿ ಎಲ್ಲಾ ವರ್ಗದವರು ಅಸಹಾಯಕರಾಗಿ ಬದುಕುವಾಗ ರಾಜಕೀಯ ಧುರೀಣರ ಪಾತ್ರ ಎಷ್ಟು ಎಂಬುದನ್ನು ಮನಗಂಡಿದ್ದ ಬರಹಗಾರ ಅಂತಹವರ ಗೊಡ್ಡು ಮಂತ್ರವಾದಿಗಳ, ಬಂಡವಾಳವಿಲ್ಲದ ಧರ್ಮದ, ಜಮೀನುದಾರರ ವಿರುದ್ಧ ಇವರನ್ನು ಸಜ್ಜುಗೊಳಿಸುವಂತಹ ತೀಕ್ಷ್ಣವಾದ ಬರವಣಿಗೆಯನ್ನು ಬರೆಯತೊಡಗಿದರು.

ಕೋಪಗೊಂಡು ಕೆರಳಿ
ಹರಿಯುವುದೆಂದಿಗೆ ಜನಪ್ರವಾಹ
ಕೆಂಪು ಹೂವು ಅರಳಿ (ತಬರನ ಹಾಡು)

ಕವಿಯು ಈ ಸಾಲಿನಲ್ಲಿ ಕ್ರಾಂತಿಯ ಮನೋಭಾವ ತುಂಬಿದ್ದರೂ, ಅದರ ಮಧ್ಯದಲ್ಲಿಯೇ ವಿಷಾದದ ಚಿಂತನೆ ತುಂಬಿರುವುದನ್ನು ಕಾಣಬಹುದು. ಇಲ್ಲಿ ಕವಿಯೂ ಮೊದಲಿನ ಹುಮ್ಮಸ್ಸನ್ನು ಕಳೆದುಕೊಂಡು ವಿಷಾದದ ಭಾವನೆಗೆ ತೆರಳಿದ್ದಾರೆ.

ಡಾ. ಸಿದ್ಧಲಿಂಗಯ್ಯನವರು ಮನುವಾದಿ ಸಾಮಾಜಿಕ ವ್ಯವಸ್ಥೆಯಲ್ಲಿ ಸಿಲುಕಿ ನೊಂದು ಬೆಂದು ಬಸವಳಿದು ಅಂತಹ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ವ್ಯಕ್ತಪಡಿಸುವುದನ್ನು ತಮ್ಮ ಕವನದಲ್ಲಿ ಕಾಣಬಹುದು. ವ್ಯವಸ್ಥೆಯ ವಿರುದ್ಧ ಅವರಿಗಿದ್ದ ಆಕ್ರೋಶ, ಸಿಟ್ಟು, ಅಸಮಾಧಾನ, ನೋವು, ಶೋಷಣೆ, ಅವಮಾನ, ಎಲ್ಲವನ್ನೂ ತಿಳಿಹೇಳುವ ಕವಿ ಅದರ ವಿರುದ್ಧ ಇಡೀ ದಲಿತ, ಕಾರ್ಮಿಕ, ರೈತ ಜನಾಂಗ ಹೇಗೆ ಪ್ರತಿಭಟನೆಗೆ ಧುಮುಕಬೇಕೆಂದು ತಿಳಿಸುತ್ತಾರೆ. ಮತ್ತು ಅಸಮಾನತೆಯ ವಿರುದ್ಧ ಕ್ರಾಂತಿಯನ್ನು ಸಾಹಿತ್ಯದ ಮೂಲಕ ಸಾರುತ್ತಾ ಜನರಲ್ಲಿ ಹೊಸ ಜೀವಕಳೆಯನ್ನು ತುಂಬಿದರು. ಇವರ ಈ ಕ್ರಾಂತಿಕಾರಿ ಚಿಂತನೆ ಪ್ರತಿರೋಧಾತ್ಮಕ ಅಂಶಗಳು ಕವನದುದ್ದಕ್ಕೂ ಮಂಡಿತವಾಗಿ ಸಮಾಜದಲ್ಲಿ ಹೊಸದೊಂದು ಬದುಕಿನ ಬದಲಾವಣೆಯನ್ನು ಕಾಣಲು ಬಯಸಿದ್ದಾರೆ. ಅದಕ್ಕಾಗಿ ದಲಿತರನ್ನು, ಕಾರ್ಮಿಕರನ್ನು, ರೈತರನ್ನು ಸಜ್ಜುಗೊಳಿಸಿದ್ದಾರೆ ಎಂದು ಹೇಳಬಹುದು.

## ಅಡಿಟಿಪ್ಪಣಿಗಳು

೧. ದಲಿತರು ಭಾಷೆ ಮತ್ತು ಸಮಾಜ, ಸಂ. ಡಾ. ಪಿ. ಮಹದೇವಯ್ಯ, ಪ್ರಸಾರಾಂಗ, ಹಂಪಿ ವಿ.ವಿ., ಪುಟ-೪೨.

೨. ಅದೇ, ಪುಟ-೩೯

೩. ಅದೇ, ಪುಟ-೩೬

೪. ಅದೇ, ಪುಟ-೩೩

೫ ಅದೇ, ಪುಟ-೩೪

೬. ಅದೇ, ಪುಟ-೪೧

೭. ಅದೇ, ಪುಟ-೪೨

೭. ಅದೇ, ಪುಟ-೪೫

೮. ಆದೇ, ಪುಟ-೧೫೯

೯. ಅದೇ, ಪುಟ-೧೬೩

೧೦. ಅದೇ, ಪುಟ-೪೩

೧೧. ನನ್ನ ಜನಗಳು ಮತ್ತು ಇತರ ಕವಿತೆಗಳು, ಡಾ. ಸಿದ್ಧಲಿಂಗಯ್ಯ, ಮುನ್ನುಡಿ ಪುಟ-XXI

೧೨. ಅದೇ, ಪುಟ-XXII

೧೩. ದಲಿತ ಕಾವ್ಯ ಕುತೂಹಲ ಪ್ರೊ॥ ಎಲ್.ರಾಜಶೇಖರಯ್ಯ, ತ.ವೆಂ.ಸ್ಮಾರಕ ಗ್ರಂಥಾಲಯ, ಪುಟ-೭೨

# ಅಧ್ಯಾಯ -೪

# ಡಾ॥ ಸಿದ್ಧಲಿಂಗಯ್ಯನವರ ಕಾವ್ಯದಲ್ಲಿ ದಲಿತ ಜನಾಂಗದ ವಿಮೋಚನೆಯ ಚಿಂತನೆಗಳು

ಶತಶತಮಾನಗಳಿಂದಲೂ ಜಾತೀ ಪದ್ಧತಿಯ ಕರಾಳತೆಯ ಕಪಿಮುಷ್ಠಿಗೆ ಸಿಲುಕಿದ ದಲಿತರಿಗೆ ಸಮಾಜದಲ್ಲಿ ಪ್ರೀತಿ, ನಂಬಿಕೆ, ಮಾನವೀಯತೆಗಳನ್ನು ಮರೆಮಾಚಲಾಗಿತ್ತು. ಇಂತಹ ಅಮಾನವೀಯವಾದಂತಹ ಮತ್ತು ಉಸಿರುಗಟ್ಟುವ ಸಾಮಾಜಿಕ ವ್ಯವಸ್ಥೆಗೆ ಕೊಡಲಿಪೆಟ್ಟು ಕೊಡುವ ಒಂದು ದೊಡ್ಡ ಸಮರವನ್ನೇ ಸಾರುವ ಅನಿವಾರ್ಯತೆ ಒದಗಿ ಬರಬೇಕಾಯಿತು.

ಜಾತಿಪದ್ಧತಿಯ ವಿರುದ್ಧ ದೇಶದಾದ್ಯಂತ ದೊಡ್ಡ ಚಳುವಳಿಯೇ ಪ್ರಾರಂಭವಾಯಿತು. ಕ್ರಿ.ಪೂ. ೬ನೇ ಶತಮಾನದಲ್ಲಿ ಭಗವಾನ್ ಬುದ್ಧ ಜಾತಿಯ ಪರಿಕಲ್ಪನೆಯನ್ನು ಪ್ರಶ್ನಿಸಿದರೆ ೧೨ನೇ ಶತಮಾನದಲ್ಲಿ ವಚನ ಚಳುವಳಿಯು ಜಾತೀ ವ್ಯವಸ್ಥೆಯಿಂದ ಜನರು ಬಿಡಗುಡೆಗೊಳ್ಳಬೇಕು ಎಂಬ ಉದ್ದೇಶದಿಂದ ಒಂದು ಕ್ರಾಂತಿಯನ್ನೇ ನಡೆಸತೊಡಗಿತು. ನಂತರ ದಾಸ ಸಾಹಿತ್ಯ ಸೃಷ್ಠಿಯಾಗುವುದರ ಮೂಲಕ ವೈದಿಕ ಪರಂಪರೆಯನ್ನು ಬುಡಮೇಲು ಮಾಡಲು ಪ್ರಯತ್ನಿಸಿತು. ೧೬ನೇ ಶತಮಾನದಲ್ಲಿ ಜಾತಿ ವ್ಯವಸ್ಥೆಯ ಸಂಕೋಲೆಯಿಂದ ಜನರನ್ನು ಬಿಡುಗಡೆಗೊಳಿಸಲು ಸರ್ವಜ್ಞನಂತಹ ಕ್ರಾಂತಿಕಾರಿ ಕವಿ ಹುಟ್ಟಿ ಬರಬೇಕಾಯಿತು. ನಂತರ ''ರಾಷ್ಟ್ರಕವಿ ಕುವೆಂಪುರವರ ಮನುಜಮತ ವಿಶ್ವಪಥ' ಎನ್ನುವ ವಿಶ್ವಮಾನವ ಸಂದೇಶ ಜಾತಿಯ ವ್ಯವಸ್ಥೆಯನ್ನು ಮೀರಿದ್ದಾಯಿತು.[೧]

ಸಾಹಿತ್ಯ ಬರವಣಿಗೆಯ ಜೊತೆಜೊತೆಯಲ್ಲಿಯೇ ಸಾಮಾಜಿಕವಾಗಿ ತಮ್ಮನ್ನು ತಾವು ತೊಡಗಿಸಿಕೊಂಡು ಜಾತಿ ವ್ಯವಸ್ಥೆಯ ವಿರುದ್ಧ ಹೋರಾಡಿದವರು ಡಾ. ರಾಮ ಮನೋಹರ ಲೋಹಿಯ ಮತ್ತು ಬಾಬಾಸಾಹೇಬ್ ಡಾ. ಅಂಬೇಡ್ಕರ್‌ರವರು. ಭಾರತ ದೇಶ ಸುಭಿಕ್ಷೆಯಿಂದ ಕೂಡಿದ ದೇಶವಾಗಬೇಕಾದರೆ ಅಂಟುಜಾಡ್ಯವಾಗಿ ಎಲ್ಲರನ್ನು ಕಾಡುತ್ತಿರುವ ಜಾತಿಪದ್ಧತಿ ದೂರವಾಗಬೇಕು ಎಂಬುದು ಇವರ ನಿಲುವಾಗಿತ್ತು. ಲೋಹಿಯಾ ಹೇಳುವಂತೆ '' ನಿಜವಾಗಿಯೂ ಒಂದು ವರ್ಗರಹಿತ ಸಮಾಜ ನಿರ್ಮಾಣವಾಗಬೇಕಾದರೆ, ಜಾತಿ ದ್ವೇಷ ಕಡಿಮೆಯಾಗಬೇಕಾದರೆ, ಜಾತಿಕಲಹ ನಿಲ್ಲಬೇಕಾದರೆ, ಪ್ರೀತಿ ಮತ್ತು ಮಾನವೀಯತೆಗಳು

ಎಲ್ಲರಲ್ಲಿ ಮನೆ ಮಾಡಬೇಕೆಂದರೆ ಅಂತರ್‌ಜಾತಿ ವಿವಾಹಕ್ಕೆ ಆದ್ಯತೆ ನೀಡ ಬೇಕು''[3] ಎಂದಿದ್ದಾರೆ. ಇದು ಜಾತಿ ಪದ್ಧತಿಯಿಂದ ಬಿಡುಗಡೆಗೊಳ್ಳುವ ಒಂದು ಬಹುಮುಖ್ಯ ಮಾರ್ಗ ಎಂದು ಹೇಳಬಹುದು.

ಭಾರತ ದೇಶದಲ್ಲಿ ಜಾತಿಪದ್ಧತಿ ಎಂಬುದು ಒಂದು ಮಹಾದುರಂತವಾಗಿದೆ. ಈ ರಾಷ್ಟ್ರವೇ ದಲಿತ ಸಮುದಾಯಕ್ಕೆ ಶತೃರಾಷ್ಟ್ರವಾಗಿ ಗೋಚರಿಸುತ್ತಿದೆ. ಜಾತಿಪದ್ಧತಿಯ ಅನುಸರಣೆಯ ಮುಖ್ಯದೋಷವೆಂದರೆ ವರ್ಣಾಶ್ರಮ ಧರ್ಮಕ್ಕೆ ಮತ್ತೆ ಇಂಬುಕೊಡುವುದಾಗಿದೆ. ಇಂತಹ ವರ್ಣಾಶ್ರಮವೇ ಅನೇಕಜಾತಿಗಳನ್ನು ಸೃಷ್ಟಿಸಿದ್ದು[3] ಈ ಸೃಷ್ಠಿಯಿಂದಲೇ ಮಾನವ ಕುಲದಲ್ಲಿ ಅನೇಕ ವೈರುಧ್ಯಗಳು ಏರ್ಪಟ್ಟು ಇಂದು ಅದರಿಂದ ಬಿಡುಗಡೆ ಹೊಂದಲು ಹವಣಿಸುವಂತಾಗಿದೆ. ಇಂತಹ ಹವಣಿಕೆಯಲ್ಲಿರುವ ದಲಿತ ಸಮುದಾಯ ತನ್ನ ಜಾತಿಯ ದಿಗ್ಬಂದನಗಳಿಂದ ಯಾವ ರೀತಿಯಲ್ಲಿ ಬಿಡುಗಡೆಯಾಗ ಬಹುದು ಎಂಬುದು ಒಂದು ವಿಚಾರವಾದರೆ ಶೋಷಣೆಯ ಬೆಂಕಿಯಲ್ಲಿ ಬೇಯುತ್ತಲೇ ನಿರಂತರವಾಗಿ ನೋವನ್ನು ಅನುಭವಿಸುತ್ತಿರುವ ದಲಿತರ ವಿಮೋಚನೆ ಹೇಗೆ ಸಾಧ್ಯ ಎನ್ನುವಂತಾಯಿತು.

ದಲಿತ ಸಮುದಾಯದಲ್ಲಿಯೇ ಜನಿಸಿ ಮೇಲುವರ್ಗದ ಜನರಿಂದ ಅವಮಾನಗೊಂಡು ದಲಿತರ ಮತ್ತು ನೊಂದವರ ವಿಮೋಚನೆಗಾಗಿಯೇ ನ್ಯಾಯಪರವಾಗಿ ಹೋರಾಟ ಮಾಡಿದವರು ಮಹಾತ್ಮ ಜ್ಯೋತಿಬಾಫುಲೆಮತ್ತು ಡಾ. ಅಂಬೇಡ್ಕರ್‌ರವರು. ಅಂಬೇಡ್ಕರ್‌ರವರ ದಲಿತ ವಿಮೋಚನೆಯ ಹೋರಾಟದ ಚಳುವಳಿಯಲ್ಲಿ ಮುಖ್ಯ ಘಟ್ಟಗಳೆಂದರೆ 'ಕಾಳಾರಾಂ' ದೇವಾಲಯಕ್ಕೆ ದಲಿತರ ಪ್ರವೇಶ ಮತ್ತು 'ಚೌಡಾರ್' ಕೆರೆಯಲ್ಲಿ ನೀರನ್ನು ಮುಟ್ಟುವಂತಹ ಪ್ರಸಂಗಗಳು ದಲಿತರನ್ನು ಕ್ರಾಂತಿಯ ಕಡೆಗೆ ಧುಮುಕಿಸಿತು. ಫುಲೆಯವರದು ಶಿಕ್ಷಣಮತ್ತು ಸಾಮಾಜಿಕ ಕ್ರಾಂತಿಯಾದರೆ, ಅಂಬೇಡ್ಕರ್‌ರವರದು ಸಾ|| ಮತ್ತುಸಂವಿಧಾನತ್ಮಕವಾಗಿ ದಲಿತರ ವಿಮೋಚನೆಯ ಕ್ರಾಂತಿಗಳಾದವು.

ದಲಿತರು ಬಾಬಾಸಾಹೇಬರ ಹೋರಾಟದ ಪ್ರತಿಫಲವಾಗಿ ಸಂವಿಧಾನಾತ್ಮಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಮತ್ತು ಉದ್ಯೋಗದಲ್ಲಿ ಸಮಪಾಲನ್ನು ಪಡೆಯುತ್ತಾ

ವಿಮೋಚನೆಯ ಹಾದಿಗೆ ನಾಂದಿ ಹಾಡಿದರು. ಆದರೆ ಸ್ವಾತಂತ್ರ್ಯ ಬಂದು ಹಲವು ದಶಕಗಳು ಕಳೆದರೂ ದಲಿತರು ಸಾಮಾಜಿಕವಾಗಿ ಅಸ್ಪೃಶ್ಯರಾಗಿಯೇ ಉಳಿಯತೊಡಗಿದರು. ದಲಿತರು ಸಾಮಾಜಿಕವಾಗಿ ಶೋಷಣೆಯಿಂದ ಬಿಡುಗಡೆ ಹೊಂದದೆ ಹೋದರೆ ಮತ್ತೆ ಯಾವುದರಿಂದಲೂ ಬಿಡುಗಡೆ ಹೊಂದಲು ಸಾಧ್ಯವಾಗದಂತಾಯಿತು.

ಸುಮಾರು ೭೦ರ ದಶಕದಲ್ಲಿ ಡಾ. ಅಂಬೇಡ್ಕರ್, ಪುಲೆ, ಭಗವಾನ್ ಬುದ್ಧ, ಪೆರಿಯಾರ್, ಶಾಹುಮಹಾರಾಜ್‌ರವರ ದಲಿತಪರ ಚಿಂತನೆಗಳು ಮತ್ತು ವಿಮೋಚನೆಯ ಸಿದ್ಧಾಂತಗಳಿಂದ ಪ್ರಭಾವಿತರಾದ ಡಾ. ಸಿದ್ಧಲಿಂಗಯ್ಯನವರು ದಲಿತರ ಗುಲಾಮಗಿರಿಯ ವಿಮೋಚನೆಗಾಗಿ ತನ್ನ ಬರವಣಿಗೆಯನ್ನೇ ಅಸ್ತ್ರವಾಗಿಸಿಕೊಂಡರು. ಇವರು ಅಂಬೇಡ್ಕರ್ ಹೇಳಿರುವ ಮಾತಿನಂತೆ ಎಜ್ಯುಕೇಟ್, ಅಜಿಟೇಟ್, ಆರ್ಗನೈಜ್ ಎಂಬ ತ್ರಿವಳಿ ಹೇಳಿಕೆಗಳನ್ನು ಮೆಲುಕು ಹಾಕುತ್ತಾ ಅದರ ಮೂಲಕವೇ ದಲಿತರ ವಿಮೋಚನೆ ಮತ್ತು ಉದ್ಧಾರ ಸಾಧ್ಯವೆಂದರು. ಕವಿ ಸಿದ್ಧಲಿಂಗಯ್ಯ ನಂತರ ಅದನ್ನು ಕನ್ನಡಕ್ಕೆ ತರುವಾಗ ದಲಿತರನ್ನು ವ್ಯವಸ್ಥೆಯ ವಿರುದ್ಧ ಹೋರಾಟಕ್ಕೆ ಹುರಿದುಂಬಿಸುವ ಭಾಷೆಯಾಗಿ ಬದಲಾಯಿಸಿ ದಲಿತರ ವಿಮೋಚನೆ ದಲಿತರಿಂದಲೇ ಸಾಧ್ಯವೆಂದು ಮನವರಿಕೆ ಮಾಡಿದರು.

ಈ ನಿಟ್ಟಿನಲ್ಲಿಯೇ ಇವರ ಬರಹಗಳು ಶೋಷಿತರ ಪರವಾಗಿದ್ದು ಅವರನ್ನು ಕರಾಳ ಬದುಕಿನಿಂದ ವಿಮೋಚನೆಗೊಳಿಸುವಂತಹ ಬರಹಗಳಾಗಿ ಹೊರಹೊಮ್ಮತೊಡಗಿದವು. ಇವರು ಬರೆದ ಕ್ರಾಂತಿಗೀತೆಗಳು ದಲಿತರನ್ನು ಜಾಗೃತರನ್ನಾಗಿಸುವ ಸಂಘಟಿಸುವಂತಹ ಕಾವ್ಯವಾಗಿ ಹೊರಹೊಮ್ಮಿದವು.

ಕರ್ನಾಟಕದಲ್ಲಿ ಅಂಬೇಡ್ಕರ್‌ರವರ ಹೋರಾಟದ ಮನೋಭಾವವನ್ನು ಹೊತ್ತು ಅವರ ತತ್ವ ಸಿದ್ಧಾಂತಗಳಿಗೆ ಮಾರುಹೋಗಿ ದಲಿತರಲ್ಲಿ ಜಾಗೃತಿಯ ಅಲೆಯನ್ನು ಎಬ್ಬಿಸಿದವರಲ್ಲಿ ಬಿ. ಬಸವಲಿಂಗಪ್ಪ, ಪ್ರೊ॥ ಬಿ.ಕೃಷ್ಣಪ್ಪ, ದೇವನೂರು ಮಹಾದೇವಯ್ಯ ಮತ್ತು ಡಾ. ಸಿದ್ಧಲಿಂಗಯ್ಯನವರೇ ಕರ್ನಾಟಕದ ದಲಿತ ವಿಮೋಚನಾ ನಾಯಕರಲ್ಲಿ ಮೊದಲ ಸಾಲಿನಲ್ಲಿ ನಿಲ್ಲುವವರು. ಆದರೆ ಎಲ್ಲರಿಗಿಂತಲೂ ಕಾವ್ಯರೂಪದಲ್ಲಿ ದಲಿತ ಭಾಷೆಯ ಪರಂಪರೆಯಂತೆಯೇ ಹೊರಬಂದು ದಲಿತರಲ್ಲಿ ಸಂಘಟನೆಯ ಮನೋಭಾವ ಬೆಳೆಯಲು ಪ್ರಚೋದಿಸಿದ್ದು ಡಾ. ಸಿದ್ಧಲಿಂಗಯ್ಯನವರ ದಲಿತ ಕಾವ್ಯ.

ದಲಿತ ಕವಿಯ ಕಾವ್ಯವು ದಲಿತರ ವಿಮೋಚನೆಯ ಕಾವ್ಯವಾಗುವುದರ ಜೊತೆಗೆ ಪ್ರತಿ ಹಳ್ಳಿ ಹಳ್ಳಿಗಳಲ್ಲೂ ಎಲ್ಲರ ಬಾಯಿಯಲ್ಲಿಯೂ ಮೌಖಿಕ ಪರಂಪರೆಯಾಗಿ ಹಬ್ಬತೊಡಗಿತು. ದಲಿತರ ಮೇಲೆ ಎಲ್ಲೆಲ್ಲಿ ದೌರ್ಜನ್ಯ ದಬ್ಬಾಳಿಕೆಗಳು ನಡೆಯುತ್ತಿದ್ದವೋ ಅಲ್ಲೆಲ್ಲ ಅವರ ಕಾವ್ಯಗಳೇ ಪ್ರತಿಭಟನೆಯ ಅಸ್ತ್ರಗಳಾಗಿ ಮೊಳಗತೊಡಗಿದವು. ದಲಿತರು ಹೇಗೆ ಅಂಬೇಡ್ಕರ್‌ರವರನ್ನು ತಮ್ಮ ದಲಿತ ಕೇರಿಗಳಲ್ಲಿ ಪ್ರತಿಷ್ಠಾಪಿಸುತ್ತಾ ಬಂದರೋ ಹಾಗೆಯೇ ಸಿದ್ಧಲಿಂಗಯ್ಯನವರ ಕಾವ್ಯವು ದಲಿತರ ಕೇರಿಗಳಲ್ಲಿ ಮೊಳಗತೊಡಗಿದವು. ನಂತರ ಅವರ ಕಾವ್ಯವು ದಲಿತರ ಬದುಕಿನಲ್ಲಿ ನೋವುಗಳನ್ನು ಮರೆಸುವ, ಭರವಸೆಯನ್ನು ತುಂಬುವ ವಿಮೋಚನೆಯನ್ನು ಶಾಶ್ವತವಾಗಿ ತೋರದಿದ್ದರೂ , ತಾತ್ಕಾಲಿಕವಾಗಿ ಅವರ ಕಣ್ಣೀರನ್ನು ಒರೆಸುವಂತಹ ಕಾವ್ಯವಾಗಿ ಹೊರಹೊಮ್ಮಿದವು.

ಕರ್ನಾಟಕದಲ್ಲಿ ಅಂಬೇಡ್ಕರ್ ವಾದದ ದಲಿತ ಪರವಾದ ಚಿಂತನೆಯು ಸಿದ್ಧಲಿಂಗಯ್ಯನವರ ಕಾವ್ಯದಲ್ಲಿನ ಧ್ವನಿಯಾಗಿ ಪ್ರತಿನಿಧಿಸುತ್ತಿತ್ತು. ಆ ಧ್ವನಿ ದಲಿತರ ವಿಮೋಚನೆಯ ಧ್ವನಿಯೂ ಆಗಿತ್ತು. 'ಕೂಗ್ತೀನಿ, ಸಿಡಿತೀನಿ, ಮನುಷ ಆಯ್ತಿನಿ' ಎನ್ನುವ ಕವಿಯ ಸಾಲು ಶೋಷಣೆಯ ಬಲೆಯೊಳಗೆ ಸಿಲುಕಿ ವಿಲವಿಲನೆ ಒದ್ದಾಡುತ್ತಿರುವ ದಲಿತರ ಅಸಹಾಯಕ ಬದುಕು ಇನ್ನು ಮುಂದೆ ಬೆಂಕಿಯಂತೆ ಧಗಧಗಿಸಿ ಉಜ್ವಲವಾಗಿ ಬೆಳಕನ್ನು ನೀಡುವ, ಬದುಕಿನಲ್ಲಿ ಬದಲಾವಣೆಯನ್ನು ಕಾಣುವ, ಗುಲಾಮಗಿರಿಯ ಸಂಕೋಲೆಯಿಂದ ಬಿಡುಗಡೆಗೊಳ್ಳುವುದರ ಸೂಚಕವಾಗಿದೆ.

ಇಕ್ರಲಾ ವದೀರ್ಲಾ ಈ ನನ್ ಮಕ್ಕಳ ಚರ್ಮ ಎಬ್ರಲಾ ಎನ್ನುವ ಭಾಷೆಯೇ ದಲಿತರಲ್ಲಿನ ಸಿಟ್ಟು, ಆಕ್ರೋಶ, ಆವೇಶದ ಭಾಷೆಯಾಗಿ ಕಂಡರು, ಅದು ದಲಿತರು ತಮ್ಮ ಬದುಕನ್ನು ಸರಿದೂಗಿಸಿಕೊಳ್ಳುವ, ತಮ್ಮ ವಿಮೋಚನೆಯನ್ನು ಕಂಡುಕೊಳ್ಳುವ ಭಾಷೆಯಾಗಿದೆ.

ಕರ್ಮಕಥೆಯ ಚಾಟಿಯನು ಮುರಿದಿಕ್ಕುತ ಮುನ್ನಡೆದು
ಹಿಮ್ಮೆಟ್ಟಿಸಿ ಅಡ್ಡಬಂದ ಪಟ್ಟಭದ್ರ ಹಿತವ
ಮಿಡಿಯುತಲಿದೆ ಎದೆಗಳಲಿ ದಬ್ಬುತಲಿದೆ ಜಡತೆಯನು
ಚಿಮ್ಮುತ್ತಿರುವ ಹೋರಾಟವು ಹೊಮ್ಮಿ ಮುಗಿಲಿಗೇರಿ ( ಕ್ರಾಂತಿಪದ)

ದಲಿತರು ತಮ್ಮ ಕರ್ಮವೆಂದು ಮೇಲುವರ್ಗದವರು ತೋರಿದ ಕಾಯಕವನ್ನು ಚಾಚು ತಪ್ಪದೆ ಮಾಡುವಂತಹ ಕಾಲವನ್ನು ಹೊರದಬ್ಬಿ ಧರ್ಮ ಜಾತಿಯ ಹೆಸರಿನಲ್ಲಿ ನಮ್ಮನ್ನು ಬಡಿಯುತ್ತಿದ್ದ ಚಾಟಿಯನ್ನು ಮುರಿದು ತಮ್ಮ ಬದುಕಿನಲ್ಲಿ ಬದಲಾವಣೆಯನ್ನು ಬಯಸುವ ದಲಿತರನ್ನು ಕವಿ ಕಾಣಲು ಬಯಸುತ್ತಾರೆ.

'ಗಳ್ಡಗಳು' ಪದ್ಯದ ಪ್ರತಿಯೊಂದು ಸಾಲಿನಲ್ಲಿಯೂ ಸಹ ಕವಿಯು ದಲಿತರನ್ನು ಕಿತ್ತು ತಿನ್ನುತ್ತಿರುವ ಭೂಮಾಲೀಕರು ಜಮೀನ್ದಾರರ ವಿರುದ್ಧಸಿಡಿದು ನಿಂತಿದ್ದರೂ ಕೊನೆಯಲ್ಲಿ ಬಯಸುವುದು ಬಿಡುಗಡೆಯನ್ನು, ಜೀತದಿಂದ ವಿಮೋಚನೆಯನ್ನು, ನಾನು ಕಮ್ಯುನಿಸ್ಟ್ ಸಿದ್ಧಾಂತದಡಿಯಲ್ಲಿ ಹೋರಾಟ ಮಾಡಿದರೆ ನ್ಯಾಯ ದೊರೆಯುತ್ತದೆ. ಬಂಧನದಿಂದ ಬಿಡುಗಡೆ ಖಂಡಿತ ಎನ್ನುವ ಭರವಸೆಯ ಧ್ವನಿಯನ್ನು ಬಿಂಬಿಸಲಾಗಿದೆ. '' ನಾ ಬದಿಕತ್ತೀನಿ ಸರಿಯಾಗುಸ್ರಾಡ್ತೀನಿ' ಎನ್ನುವಂತೆ ತಮ್ಮ ಬದುಕನ್ನು ಹಸನುಗೊಳಿಸಿಕೊಳ್ಳುವ ಕಡೆಗೆ ಮುಖಮಾಡಿ ನಿಂತಿರುವುದನ್ನು ಕಾಣಬಹುದು.

ತಾತ ಮುತ್ತಾತನ ಕಾಲ್ದಿಂದ ಜೀವತೇದೋರು
ಕೋರ್ಟ್ನಂಗಳದ ತುಂಬ ನಿಂತ್ಕಂಡು
ಕ್ಯಾಕ ಹಾಕಿ ಕುಣೀತರೇ
ಸುಲ್ದೋರ್ನ ಸುಲಿಯೋದಿನಾ ಅದು
ಅವತ್ತು ದಲಿತರ ಹಬ್ಬ (ಹಬ್ಬ)

ಜೀತಗಾರಿಕೆಯಲ್ಲಿಯೇ ಬಿಸಿಲಿಗೆ ಮೈಯೊಡ್ಡಿ ಜೀವವನ್ನೇ ತೇದಿರುವ ದಲಿತರಿಗೆ ಕಾನೂನಿನ ಮೂಲಕ ಜೀತಗಾರಿಕೆಯಿಂದ ಬಿಡುಗಡೆಯಾಗುತ್ತಿದೆ. ಈ ಬಿಡುಗಡೆ ದಲಿತರ ಬದುಕಿನ ಒಂದು ಮೈಲಿಗಲ್ಲಾಗಿದ್ದು ಇನ್ನು ಮುಂದೆ ನಮ್ಮನ್ನು ಹಿಂಸೆಗೊಳಪಡಿಸಿದ ಜನರಿಂದ ಯಾವ ತೊಂದರೆಯೂ ಇಲ್ಲ. ದಲಿತರಿಗೆ ಅವರದೇ ಆದಂತಹ ಕಾನೂನು ಜಾರಿಯಾಗಿದೆ. ಅದಕ್ಕೆಂದೇ ಒಂದು ನ್ಯಾಯಾಲಯವೂ ಇದೆ. ದಲಿತರು ಇನ್ನು ಈ ಸಮಾಜದಲ್ಲಿ ನಿಕೃಷ್ಟವಾಗಿ ಬದುಕದೆ ಎಲ್ಲರಿಗೂ ಸರಿಸಮಾನರಂತೆ ಬದುಕಬಹುದು ಎಂದು ತಿಳಿಸುತ್ತಾರೆ. ಇದು ಇಡೀ ದಲಿತ ಜನಾಂಗದ ವಿಮೋಚನೆಯ ಒಂದು ಮೈಲಿಗಲ್ಲಾಗಿದೆ.

ದಲಿತರ ಬದುಕಿನಲ್ಲಿ ಬದಲಾವಣೆಯನ್ನು ಬಯಸುವಂತಹ ಕವಿಯ ಮನಸು 'ಹಣೆಬರವು ಎಂಬ ನಾಟಕವು' ಎಂಬ ಕವನದುದ್ದಕ್ಕೂ ವ್ಯವಸ್ಥೆಯ ವಿರುದ್ಧ ಪ್ರಶ್ನೆಗಳನ್ನು

ಎತ್ತುತ್ತಾ, ಅದಕ್ಕೆ ಪ್ರತಿರೋಧವನ್ನು ಒಡ್ಡುತ್ತಾ ಬದುಕಿನಲ್ಲಿ ಪರಿವರ್ತನೆಯನ್ನು ಬಯಸುತ್ತಿದ್ದಾರೆ.

ಆ ಕೇಳಾನ ದೇವುರ್ನೆ ಹುಟ್ಸಿದ ಮಕ್ಕುಗೇನೆ
ವಬ್ಬುರ್ಝ್ಗೊಂದು ವಬುರ್ಗ್ಗೊಂದು ಆಗಬೋದಾ ?
ಬರಿವಾಗ್ಲೆ ಭೇದಾನ ಮಾಡುಬೋದಾ ?
ಬರ್‍ರಾಲಾ ಕೇಳಾನ ನ್ಯಾಯಾವ ಕೇಳಾನ
ತಿದ್ಸಾನ ಹಣೆಬರವಾ (ಹಣೆಬರವು ಎಂಬ ನಾಟಕವು)

ಅದುವರೆಗೂ ಗಾಡಾಂಧಕಾರದಲ್ಲಿ ಕುಳಿತಿದ್ದ ದಲಿತರು, ಸೃಷ್ಟಿಸಿದ ದೇವರನ್ನೇ ಹಿಡಿದು ನಿಲ್ಲಿಸಿ ಅವನನ್ನೇ ಪ್ರಶ್ನಿಸುತ್ತಿದ್ದಾರೆ. ಹಣೆಬರಹ ಬರೆಯುವವ ಒಬ್ಬ ಇರುವುದಾದರೆ, ಯಾಕೆ ಬೇಧ ಭಾವ, ಮೇಲುಕೀಳು ತಾರತಮ್ಯ ಮಾಡುತ್ತಾನೆ ಎಂದು ವ್ಯಂಗ್ಯವಾಗಿ ಪ್ರಶ್ನಿಸುತ್ತಾ ದಲಿತ ಸಮುದಾಯವು ನ್ಯಾಯದ ಬಾಗಿಲು ತಟ್ಟಿ ಅನ್ಯಾಯದ ಬಾಗಿಲನ್ನು ಮುಚ್ಚಲು ಸಿದ್ಧರಿರುವುದನ್ನು ಹೇಳುತ್ತಿದೆ. ಅಂದರೆ ನಾವು ಮಾನಸಿಕವಾಗಿ ಸದೃಢರಾಗಬೇಕು, ಗುಲಾಮಗಿರಿಯ ಸಂಕೋಲೆಗಳನ್ನು ಕಡಿದೊಗೆಯಬೇಕು. ಆ ಶಕ್ತಿ ಅಕ್ಷರ ಜ್ಞಾನದಲ್ಲಿದೆ. ಈ ಜ್ಞಾನ ಶಾಖೆಯು ಕಾನೂನಿನ ಚೌಕಟ್ಟಿನಡಿಯಲ್ಲಿರುವುದರಿಂದ ಮೊದಲು ದಲಿತರು ಅಕ್ಷರ ಜ್ಞಾನ ಮತ್ತು ಕಾನೂನಿನ ಜ್ಞಾನ ಪಡೆಯಬೇಕೆಂದು ತಿಳಿಸುತ್ತಿದ್ದಾರೆ.

''ನನ್ನವಳಿಗೆ'' ಪದ್ಯವನ್ನು ಬರೆಯುತ್ತಾ ಹೆಣ್ಣನ್ನು ಕ್ರಾಂತಿಯ ಸಂಕೇತವಾಗಿ ಬಳಸಿರುವರಾದರೂ, ಬಂಧನಕ್ಕೊಳಪಟ್ಟಿರುವ ಹೆಣ್ಣು ಬಂಧಮುಕ್ತಳಾಗಬೇಕು ಎನ್ನುವುದಾಗಿದೆ. ವಡವೆ ಹಾಕುವೆ, ಬಳೆ ತೊಡಿಸುವೆ, ಬೊಟ್ಟು ಇಕ್ಕುವೆ ಎನ್ನುವ ಮಾತುಗಳೇ ಇದುವರೆಗೂ ಅನುಭವಿಸಿರುವ ಯಾತನೆ, ಸಂಕಟ, ನೋವುಗಳನ್ನು ದೂರ ಸರಿಸಿ ಅದರಿಂದ ವಿಮೋಚನೆಯನ್ನು ಹೊಂದುವ ಕುರುಹಾಗಿ ಗೋಚರಿಸುತ್ತದೆ.

ಧರ್ಮಗುರುವಿನ ಪೀಠ ಮುಗ್ಗರಿಸಿ ಮುರಿದಿತ್ತು
ದೈವಗುಡಿ ಜನರ ಮನೆ ಆಗುತ್ತಿತ್ತು
ಕನಸೊಂದು ನನಸಾಗಿ ಕ್ರಾಂತಿ ಬೆಳೆ ಹುಲುಸಾಗಿ
ಬೆಳೆವುದೆನ್ನುವ ಆಸೆ ಮೂಡುತ್ತಿತ್ತು (ಭವಿಷದ್ಗೀತೆ)

ಧರ್ಮ ಉಪದೇಶಗಳ ಗುಂಗಿನಲ್ಲಿದ್ದ ಮೇಲುಜಾತಿಯ ಜನರು ದಲಿತರನ್ನು ಬಂಧನದಲ್ಲಿರಿಸಿ ಅವರನ್ನು ಅಸ್ಪೃಶ್ಯರನ್ನಾಗಿ ಮಾಡಿ ಗುಡಿಗಳಿಗೆ ಪ್ರವೇಶವನ್ನು ನಿಷೇಧ ಮಾಡಲಾಗಿತ್ತು. ಆದರೆ ಡಾ. ಅಂಬೇಡ್ಕರವರು 'ಕಾಳಾರಾಂ' ದೇವಾಲಯವನ್ನು ದಲಿತರೊಡನೆ ಪ್ರವೇಶಿಸಿ ಅವರಲ್ಲಿ ಬದಲಾವಣೆಯ ಮನಸ್ಥಿತಿಯನ್ನು ಸೃಷ್ಟಿಸಿದರು. ಇದರ ಪ್ರಭಾವದಿಂದ ಕವಿಯು ತನ್ನ ನಾಡಿನಲ್ಲಿ ದಲಿತರಿಗೆ ನಿಷೇಧಿಸಿದ್ದ ಗುಡಿಯ ಪ್ರವೇಶವನ್ನು ಖಂಡಿಸುತ್ತಾ ಆ ಗುಡಿಗಳನ್ನೇ ತಮ್ಮ ವಾಸದ ಮನೆಗಳಾಗಿ ಪರಿವರ್ತಿಸಿ ಕೊಳ್ಳುವ ಬದಲಾವಣೆ ಬಯಸಿದ್ದಾರೆ. ಇದು ಕೇವಲ ಬರಹಗಾರನ ಕನಸಾಗದೆ ಇಡೀ ದಲಿತ ಜನಾಂಗದ ವಿಮೋಚನೆಯ ಮಾರ್ಗವಾಗಿತ್ತು. ಕುವೆಂಪುರವರು ಹೇಳಿದ ಮಾತುಗಳು ಇಲ್ಲಿ ದಾಖಲಾಗುತ್ತವೆ. '' ಗುಡಿ ಚರ್ಚು ಮಸೀದಿಗಳ ಬಿಟ್ಟು ಹೊರಬನ್ನಿ, ಅಸಮಾನತೆಯನ್ನು ಬುಡಮಟ್ಟ ಕೀಳಬನ್ನಿ'' ಎನ್ನುವ ಮಾತು ಕೂಡ ಬರಹಗಾರನ ಮೇಲೆ ಅಗಾಧ ಪ್ರಭಾವ ಬೀರಿ ಹೊಸ ಬದಲಾವಣೆ ಮತ್ತು ವಿಮೋಚನೆಯ ಕಡೆಗೆ ಮುಖ ಮಾಡಿ ನಿಲ್ಲಲು ಸಾಧ್ಯವಾಯಿತು.

ದೇವ್ರು ದಿಂಡ್ರುಗ್ ಕಡ್ಡಿ ಹಚ್ಚಿ
ಸಾಕಾಗೋಯ್ತಪ್ಪ
ನನ್ ಮಗ್ನವ್ ಹಂಗೇ ಕುಂತವೆ
ಉಸ್ರೇ ಬಿಡಂಗಿಲ್ಲ
ಸನ್ಕೆ ಗುದ್ಲಿ ತಗಂಡು
ದೇವ್ಗಳ್ ವಂಟಂಗ್ ಹೋಗ್ಬೇಕು
ಕಳೆ ಕಿತ್ತಂಗ್ ಕೀಳ್ಬೇಕು (ನಗ್ಬೇಕು)

ಕವನದ ತಲೆಬರಹವೇ ದಲಿತರು ದುಃಖವನ್ನು ಮರೆತು ಅಂತಹ ಪರಿಸ್ಥಿತಿಯಿಂದ ಬಿಡುಗಡೆಗೊಂಡು ಹೊಸ ಬದುಕಿನ ಕಡೆಗೆ ಕೈ ಚಾಚಿರುವ ಕುರುಹಾಗಿ ಕಾಣುತ್ತಿದೆ. ಇದುವರೆಗೂ ದಲಿತರು ದೇವರು ದಿಂಡರನ ಹೆಸರಿನಲ್ಲಿ ಮೂಢರಾಗಿ ಕುಳಿತಿದ್ದರು. ಅದರ ನಂಬಿಕೆಯಿಂದ ಸಮಾಜದಲ್ಲಿ ಮತ್ತಷ್ಟು ಶೋಷಣೆ ಹೆಚ್ಚಿತೇ ವಿನಃ ಬಿಡುಗಡೆ ತೋರದಾಯಿತು. ಇದರಿಂದ ರೊಚ್ಚಿಗೆದ್ದ ದಲಿತರು ಇಡೀ ದೇವತೆಗಳಿಗೆ ಮತ್ತು ಪುರೋಹಿತಶಾಹಿ ವ್ಯವಸ್ಥೆಗೆ ಛೀಮಾರಿ ಹಾಕುತ್ತಾ ನಾವು ನಿಜವಾದ ಬದುಕನ್ನು ನಡೆಸಬೇಕಾದರೆ ಎಲ್ಲವನ್ನು ಕಳಚಿಡಬೇಕು. ಅಸಾಧ್ಯವಾದ, ಅಸಹಾಯಕವಾದ

ಸಂಗತಿಯನ್ನು ದೂರ ಮಾಡಿ ಬದುಕನ್ನು ಸವೆಸಲು ಯಾವುದು ಸರಿಯಾದ ಮಾರ್ಗ ಎನ್ನುವುದರ ಕಡೆ ಮುಖ ಮಾಡಬೇಕು ಎಂದು ಅಭಿಪ್ರಾಯ ಪಡುತ್ತಾರೆ.

ಕವಿಯು ತಮ್ಮ 'ನಾವು' ಎಂಬ ಕವನದಲ್ಲಿ ಇದುವರೆಗೂ ನಮ್ಮನ್ನು ಗುಲಾಮರನ್ನಾಗಿ ಮಾಡಿಕೊಂಡಿದ್ದ ಮೇಲುಜಾತಿಯ ಜನರಿಗೆ ಮುಂದೊಂದು ದಿನ ತಕ್ಕ ಪ್ರತಿಫಲವಿದೆ ಎಂಬುದನ್ನು ಸಾರುತ್ತಿದ್ದಾರೆ.

ದೈವ ಮತದ ಮುಂದೆ ಮಾಡಿ
ನಮಗೆ ಮೋಸ ನಡೆದಿದೆ
ಅನ್ಯಾಯಕೆ ಅನ್ಯಾಯ
ಮುಯ್ಯಿಗೆ ಮುಯ್ ಮುಂದಿದೆ (ನಾವು)

ಈ ಸಾಲುಗಳಲ್ಲಿ ತಮ್ಮನ್ನು ಶೋಷಣೆ ಮಾಡಿದ ಜನಾಂಗಕ್ಕೆ ಮುಂದೊಂದು ದಿನ ಅದೇ ರೀತಿಯ ಅನುಭವವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ ಎನ್ನುತ್ತಿದ್ದಾರೆ. ಇಲ್ಲಿ ಕವಿಗೆ ಮೇಲು ವರ್ಗದವರ ಬಗ್ಗೆ ಸಿಟ್ಟಿಲ್ಲವಾದರೂ ವ್ಯವಸ್ಥೆಯಲ್ಲಿ ದಲಿತರಿಗೂ ಗೌರವ ಸ್ಥಾನ, ಅಗತ್ಯ ಮೂಲ ಸೌಕರ್ಯ ಸಿಗಬೇಕು. ಇದರಿಂದ ನಿಜವಾಗಿಯು ನೊಂದವರ ಕಣ್ಣೀರನ್ನು ಒರೆಸಲು ಸಾಧ್ಯ. ದಲಿತರ ವಿಮೋಚನೆ ಸಾಧ್ಯ ಎಂದು ತಿಳಿಸುವುದು ಬರಹಗಾರನ ಮುಖ್ಯ ಉದ್ದೇಶವಾಗಿತ್ತು.

ಜಾತಿಯನ್ನು ಹೂತು ಬಿಡಲು
ಲಕ್ಷ ಲಕ್ಷ ಜನರನು
ಕಟ್ಟಿ ಕ್ರಿಯಾರಂಗಕಿಳಿದ
ಸ್ವಾಭಿಮಾನ ಸಮುದ್ರ (ಅಂಬೇಡ್ಕರ್)

ಡಾ.ಅಂಬೇಡ್ಕರ್‌ರವರು ಭಾರತ ದೇಶದಲ್ಲಿ ಅಮಾನುಷವಾಗಿ ತಾಂಡವವಾಡುತ್ತಿದ್ದ ಜಾತಿ ಪದ್ಧತಿಯನ್ನು ನಿರ್ಮೂಲನೆ ಮಾಡಲು ಇಡೀ ದೇಶದ ಎಲ್ಲಾ ದಲಿತ ಜನಾಂಗವನ್ನು ಒಗ್ಗೂಡಿಸಿದರು. ಸಂವಿಧಾನಿಕವಾಗಿ ದಲಿತರಿಗೆ ವಿಮೋಚನೆಯ ದಾರಿಯನ್ನು ತೋರಿದರು. ಇವರ ಈ ದಲಿತಪರ ಕೆಲಸದಿಂದ ಸ್ಫೂರ್ತಿಗೊಂಡ ದಲಿತ ಬರಹಗಾರರು ಅವರ ಸ್ವಾಭಿಮಾನದ ಬದುಕಿನ ಸಂದೇಶವನ್ನು ಸಾರಲು ಮುಂದಾದರು.

ದಲಿತರ ವಿಮೋಚನೆಗೆ ಅಂಬೇಡ್ಕರ್‌ರವರ ಸಿದ್ಧಾಂತವೇ ಮುಖ್ಯವೆಂದು ಸಾರಿದರು. ಕವಿಯು ದಲಿತರಲ್ಲಿ ಸ್ವಾಭಿಮಾನದ ವ್ಯಕ್ತಿತ್ವವನ್ನು ತುಂಬುತ್ತಾ ಅವರ ವಿಮೋಚನೆಗೆ ಕರ್ನಾಟಕದಲ್ಲಿ ಸ್ವಾಭಿಮಾನ ಚಳುವಳಿಯನ್ನು ಹೂಡಿದರು.

ಸಾವಿರಾರು ನದಿಗಳು ಕವಿತೆಯಲ್ಲಿ ಮೂಡಿಬಂದಿರುವಂತೆ ದಲಿತರು ಅಸಮಾನತೆಯ ವಿರುದ್ಧ ಧಿಕ್ಕಾರಗಳನ್ನು ಕೂಗುತ್ತಾ ಹೊರನಡೆದರು. ಆಗ ಯಾಜಮಾನ್ಯ ವ್ಯವಸ್ಥೆಯಲ್ಲಿನ ಮಾಲಿಕರಿಗೆ ತರತರ ನಡುಗುವ ಸ್ಥಿತಿ ನಿರ್ಮಾಣವಾಗತೊಡಗಿತು. ಇಡೀ ದಲಿತರ ಸಾಗರೋಪಾದಿಯಲ್ಲಿ ಹೋರಾಟಕ್ಕೆ ಸೇರಿದ ಕ್ಷಣವೇ ಮಾಲೀಕರ ಕುತ್ತಿಗೆ ಅದುಮಿದಂತಾಯಿತು. ಅಂದರೆ ಇವರ ಕ್ರಾಂತಿಕಾರಿ ಚಿಂತನೆಗಳೇ ದಲಿತರ ವಿಮೋಚನೆಯ ಮೂಲ ನೆಲೆಗಳಾದವು.

ಕಾರ್ಲ್‌ಮಾರ್ಕ್ಸ್‌ರವರ ಸಿದ್ಧಾಂತವು ಕೆಲವು ಬಾರಿ ಕಾವ್ಯದ ಬರವಣಿಗೆಗೆ ಸ್ಫೂರ್ತಿಯಾಗಿರುವುದನ್ನು ಗಮನಿಸಬಹುದು. ಇಲ್ಲಿ ದಲಿತರ ಉದ್ಧಾರ ಮಾರ್ಕ್ಸ್ ಸಿದ್ಧಾಂತದಿಂದ |ಎಂದು ಕೆಲವೊಮ್ಮೆ ಚಿಂತಿಸಿರುವುದನ್ನು ಗಮನಿಸಬಹುದು. ಕವಿಯು ತನ್ನ ಎಲ್ಲಾ ಕಾವ್ಯಗಳಲ್ಲಿಯೂ ಕೆಂಪನ್ನೇ ಕ್ರಾಂತಿಯ ಸಂಕೇತವಾಗಿ ಬಳಸಿ ಕೊಂಡಿರು ವುದರಿಂದಲೇ ಕವಿಯ ಆಲೋಚನೆಗಳು ಕಮ್ಯುನಿಸ್ಟ್ ಸಿದ್ಧಾಂತದಿಂದ ಮೂಲಕವೂ ಸ್ಫೂರ್ತಿಗೊಂಡಿದ್ದವು. ಆ ಮೂಲಕ ಕವಿಯು ಭಾರತದಲ್ಲಿನ ರೈತರು, ಕಾರ್ಮಿಕರು, ಎಲ್ಲರ ಬಗ್ಗೆಯೂ ಆಲೋಚಿಸಲು ಸಾಧ್ಯವಾಯಿತು.

ದಲಿತ ಭಾರತದ ಬಾವುಟದಲ್ಲಿ
ನಿಂತರು ರೈತರು ಕಾರ್ಮಿಕರು
ಬಿರಿದವು ಹೂವು ಬನಬನದಲ್ಲಿ
ಹಾರಿದೊ ಹಕ್ಕಿ ನೂರಾರು
ಕಂಡಿತು ಕೆಂಪು ಮೂಡಣದಲ್ಲಿ
ಬೆಳಗಾಯಿತು ಬಡವರಿಗೆ (ದಲಿತರು ಬರುವರು)

ದೇಶದ ಪ್ರತಿ ಹಳ್ಳಿಗಳಲ್ಲೂ ದಲಿತರು ಕ್ರಾಂತಿಯ ಕಹಳೆಯನ್ನು ಊದುವುದರೊಂದಿಗೆ ಇಡೀ ದೇಶದಲ್ಲಿನ ರೈತರು ಕಾರ್ಮಿಕರನ್ನು ಒಂದುಗೂಡಿಸಿದರು. ಅವರ ಅಂತರಾಳದಲ್ಲಿ ಇದುವರೆಗೂ ಅಡಗಿದ್ದ ಕನಸುಗಳೆಲ್ಲವೂ ಹಕ್ಕಿಗಳಂತೆ

ಹಾರಾಡತೊಡಗಲು ಪ್ರಾರಂಭಿಸಿದವು. ಇದರಿಂದ ಇದುವರೆಗೂ ಮೂಕರಾಗಿ ಬದುಕುತ್ತಿದ್ದ ಜನರಿಗೆಭರವಸೆಯ ಕಿರಣ ಕಾಣಿಸತೊಡಗಿತು. ಅವರ ಬದುಕಿನಲ್ಲಿ ಹೊಸ ಬದಲಾವಣೆಗಳಾಗತೊಡಗಿದವು. ನೊಂದ ಜನರಿಗೆ ಹೇಗೆ ಅಂಬೇಡ್ಕರ್‌ರವರ ಸಿದ್ಧಾಂತಗಳು ವಿಮೋಚನೆಯ ಆಯುಧಗಳಾಗಿದ್ದವೊ ಹಾಗೆಯೇ ಕನ್ನಡ ನಾಡಿನಲ್ಲಿ ದಲಿತ ಚಳುವಳಿ ಮತ್ತು ಸಾಹಿತ್ಯ ದಲಿತ ಬದುಕಿನಲ್ಲಿ ಆಶಾಕಿರಣಗಳಾದವು. ಅವರ ಹೃದಯಾಂತರಾಳದಲ್ಲಿ ಇದ್ದ ಅಂಧಕಾರ ತೊಲಗಿ ತಮ್ಮ ವಿಮೋಚನೆಯ ಬಗೆಗಿನ ಚಿಂತನೆಗಳು ಬೆಳೆಯತೊಡಗಿದವು.

ತುಳಿಯುವ ಜನರನ್ನು ಸುಮ್ಮನೆ ಬಿಡಲಾರೊ
ಮನೆ ಮನೆ ಮುಂದಲ ಗಿಡದಲ್ಲಿ / ನಾವೆಲ್ಲ
ಬರುತೀವಿ ಕೆಂಪನೆ ಹೂವಾಗಿ (ಬಿದ್ದಾವು ಮನೆಗಳು)

ಕವಿಯು ದಲಿತರನ್ನು ಶೋಷಣೆಗೊಳಪಡಿಸಿದ್ದವರ ವಿರುದ್ಧ ಇಡೀ ದಲಿತ ಸಮುದಾಯವನ್ನೇ ಎತ್ತಿ ಕಟ್ಟುತ್ತಾ ಅವರ ವಿರುದ್ಧ ಕ್ರಾಂತಿಯ ಸಮರವನ್ನು ಸಾರುತ್ತಾ ಹೋರಾಟದ ಪಥವನ್ನು ತುಳಿಯದಿದ್ದರೆ ಎಂದಿಗೂ ಅವರ ವಿಮೋಚನೆಯಾಗದು ಎಂಬುದನ್ನು ಕವಿ ಹೇಳಲು ಬಯಸುತ್ತಿದ್ದಾರೆ.

ಓ ರಕ್ತ ಸಿಕ್ತ ಪರಿವರ್ತನೆಯೇ
ಓ ಮುಂಗಾಣುವ ಕ್ರಾಂತಿಯೇ (ಈ ದೇಶದ ಸೆರೆಮನೆ)

ದಲಿತರು ತಮ್ಮ ಬದುಕಿನಲ್ಲಿ ತಲೆದೋರಿರುವ ಗುಲಾಮಗಿರಿಯನ್ನು ತೊಡೆಯಬೇಕಾದರೆ, ಅಸಮಾನತೆಯಿಂದ ಕೂಡಿರುವ ಸಮಾಜ ಪರಿವರ್ತನೆಗಾಗಿ ಕ್ರಾಂತಿಯು ನಡೆಯಲೇ ಬೇಕಾಗಿದೆ ಎಂದು ಹೇಳುತ್ತಾ 'ಹೋರಾಟದ ದಾರಿ'ಕವಿತೆಯಲ್ಲಿ' ಇಡೀ ದಲಿತ ಸಮುದಾಯವನ್ನು ಹೋರಾಟಕ್ಕೆ ಅಣಿಗೊಳಿಸಿ ಬಂಧಮುಕ್ತರಾಗುವುದನ್ನು ಸೂಚಿಸುತ್ತಾರೆ.

ಕುಂತ ಮನಗಳೆ ನಿಂತ ಜನಗಳೆ
ಕೇಳದೆ ಹೊಸನುಡಿ, ಕಾಣದೆ ಕೆಂಗಿಡಿ
ಹೋರಾಟವೆ ದಾರಿ
ಕೊನೆಗಾಣದ ಬಾಳಿನ ಗೋಳಿಗೆ
ಹೋರಾಟವೇ ದಾರಿ (ಹೋರಾಟವೇ ದಾರಿ)

ಅಂಧಕಾರದಲ್ಲಿ ಬದುಕುತ್ತಾ ಜಡವಸ್ತುವಿನಂತೆ ಬದಲಾವಣೆಯನ್ನು ಬಯಸದೆ ಮೂಕರಾಗಿದ್ದ ದಲಿತ ಜನಾಂಗಕ್ಕೆ ಹೋರಾಟದ ದಾರಿಯನ್ನು ತೋರುತ್ತಿದ್ದಾರೆ. ಮತ್ತು ದಲಿತರ ಬಾಳಿನ ಗೋಳು, ಕೊನೆಗೊಂಡು ಬದುಕಿನಲ್ಲಿ ಹೊಸ ಬದಲಾವಣೆಯನ್ನು ಬಯಸುತ್ತಿರುವಿರಾದರೆ ಅದಕ್ಕೆ ಹೋರಾಟವೇ ಪ್ರಮುಖವಾದ ದಾರಿ. ಇದರಿಂದಲೇ ದಲಿತರು ಬಂಧನದ ಬದುಕಿನಿಂದ, ಜಾತಿಯ ಸಂಕೋಲೆಯಿಂದ, ಅಂಧಕಾರದಿಂದ ಬಿಡುಗಡೆ ಹೊಂದಲು ಸಾಧ್ಯ ಎಂಬುದನ್ನು ತಿಳಿಸುತ್ತದೆ.

'ಚೋಮನ ಮಕ್ಕಳ ಹಾಡು' ಕವನದ ಹಿಂದಿರುವಂತಹ ಧ್ವನಿಯನ್ನು ಕಾಣುವುದಾದರೆ ಚೋಮನು ಹೊಲೆಯನಾಗಿದ್ದ ಕಾರಣಕ್ಕಾಗಿಯೇ ಆತನಿಗೆ ಭೂಮಿ ಸಿಗಲಿಲ್ಲ. ಆದರೆ ಆತನ ಮಗ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾದ ಕಾರಣಕ್ಕಾಗಿ ಭೂ ಒಡೆತನ, ಜಾತಿನಿಂದನೆ ಎಲ್ಲದರಿಂದಲೂ ಯಶಸ್ಸು ಕಾಣಲು ಸಾಧ್ಯವಾಯಿತು. ಇದನ್ನು ಆಧಾರವಾಗಿಟ್ಟುಕೊಂಡ ಕವಿಯು ಚೋಮನ ಮಕ್ಕಳ ಕಣ್ಣೀರಿನ ಕತೆಯನ್ನು ಹೇಳುವುದರ ಜೊತೆಗೆ ಬಿಡುಗಡೆಯನ್ನು ಸೂಚಿಸುವ ಧ್ವನಿಯನ್ನು ಎತ್ತುತ್ತಾರೆ.

ಚುಕ್ಕಿಗಳ ಲೋಕದಲಿ ಚಿಕ್ಕವನು ತಾನು
ಬೆಳ್ಳಿಬನ ಬೆಳ್ಳಿಹೂ ಬಿಳಿಯ ಮಾತುಗಳು
ಬೆಳಕಂಡು ಬೆಳೆಯಬೇಕು
ಬಿಳುಪಾಯ್ತು ಬಾವುಟದ ಬಣ್ಣ
ನಾನಾದೆ ಸಣ್ಣ ಸಣ್ಣ
ನೀನಂದು ಬಲತುಂಬಿದೆ
ಮುನ್ನಡೆಸಿದೆ (ಮೆರವಣಿಗೆ)

ಸಮಾಜದಲ್ಲಿ ತಲೆದೋರಿರುವ ಅಸಮಾನತೆಯನ್ನು ಹೊಡೆದೋಡಿಸಿ ನವ ಸಮಾಜವನ್ನು ಸೃಷ್ಟಿಸುವುದರ ಮೂಲಕ ದಲಿತರು ಬೆಳಕನ್ನು ಕಾಣಲು ಸಾಧ್ಯವೆನ್ನುತ್ತಾರೆ. ಬಿಳಿಯ ಹೂವು ದಲಿತರ ಬದುಕಿನ ಪ್ರಶಾಂತತೆಯ ಮನಸ್ಸಿನ ಶುದ್ಧತೆಯನ್ನು ಸೂಚಿಸುತ್ತದೆ. ಅಂದರೆ ಅಸಮಾನತೆಯ ವಿರುದ್ಧ ಹೋರಾಟಮಾಡಿ ಅಸಹಾಯಕರಾಗಿ ಬದುಕುತ್ತಿರುವ ದಲಿತರಲ್ಲಿ ಸ್ಫೂರ್ತಿ, ಹುಮ್ಮಸ್ಸಿನ ಬಲತುಂಬಿ ಮುನ್ನಡೆಸಿದರೆ ದಲಿತರು ಅಸ್ಪೃಶ್ಯತಾ ಆಚರಣೆ, ಜಾತಿನಿಂದನೆ, ಎಲ್ಲವುಗಳಿಂದ ವಿಮೋಚನೆಯಾಗ ಬಹುದೆಂದಿದ್ದಾರೆ. 'ಬಂದಿರುವವರು ಹುಲಿಗಳಾಗಿ' ಎಂಬುವ ತಲೆಬರಹವೇ ಒಂದು ರೀತಿಯ

ಬಿಡುಗಡೆಯ ಸಂಕೇತವಾಗಿದೆ. ದಲಿತರು ಹುಲಿಗಳಂತೆ ಗರ್ಜಿಸುತ್ತಾ ಅಸಮಾನತೆಯನ್ನು ಸುಟ್ಟು ನವ ಸಮಾಜ ನಿರ್ಮಿಸಿದಾಗಲೇ ದಲಿತರ ಉದ್ಧಾರ ಎಂಬುದನ್ನು ತೋರುತ್ತಾರೆ.

ಕವಿಯು ದಲಿತರ ವಿಮೋಚನೆಯ ಜೊತೆಗೆ ಕಾರ್ಮಿಕರು, ರೈತರ ವಿಮೋಚನೆಯ ಬಗೆಗೂ ಚಿಂತಿಸುತ್ತಿರುವುದನ್ನು ಅವರ ಕೆಲವು ಕವನದ ಸಾಲುಗಳಲ್ಲಿ ಗಮನಿಸಬಹುದು. ಅವರ ಕಪ್ಪುಕಾಡಿನ ಹಾಡಿನಲ್ಲಿ ಬರೆದಿರುವ 'ಬೆಂಗಳೂರಿನ ಹಾಡು' ಕವನವು ಬೆಂಗಳೂರಿಗೆ ಬಂದು ನಿರಾಶ್ರಿತರಾಗಿ ಬದುಕುತ್ತಿರುವ ಜನರಿಗೆ ಒಂದು ನೆಲೆಯನ್ನು ಕಂಡುಕೊಳ್ಳುವಂತೆ ಹುರಿದುಂಬಿಸುವುದು ಅವರ ಬದುಕಿನ ಬದಲಾವಣೆಯ ಒಂದು ಪ್ರಯತ್ನವಾಗಿದೆ.

ದೋಣಿಯ ಹಾಡು ಕವಿತೆಯಲ್ಲಿ ಒಬ್ಬ ನಾಯಕನ ಜೀವನವನ್ನೇ ಹಾಡಾಗಿಸಿರುವ ಕವಿಯು ಇದುವರೆಗೂ ಸಮಾಜದಲ್ಲಿ ತಲೆದೋರಿರುವ ಅಂಧಕಾರವನ್ನು ಹೋಗಲಾಡಿಸಿ ಬೆಳಕನ್ನು ಮೂಡಿಸುವುದರ ಜೊತೆಗೆ ಇಡೀ ದಲಿತ ಸಮುದಾಯವು ನೆಮ್ಮದಿಯ ಹಂತವನ್ನು ತಲುಪುವ ಆಶಯವನ್ನು ಕವಿ ತನ್ನ ಕಾವ್ಯದಲ್ಲಿ ಕಟ್ಟಿಕೊಡುತ್ತಾರೆ.

'ಕೋರಿಕೆ 'ಕವನದಲ್ಲಿ ಕವಿಯು ಬದುಕಿನ ಬವಣೆಯನ್ನು ತಪ್ಪಿಸಿ ಹೊಸ ಜೀವನವನ್ನು ಸೃಷ್ಟಿಮಾಡಿಕೊಳ್ಳಲು ಇಡೀ ಸಮುದಾಯಕ್ಕೆ ಎಚ್ಚರಿಕೆ ಕೊಡುತ್ತಿದ್ದಾರೆನ್ನಬಹುದು. ಆದರ ಮೂಲಕವೇ ದಲಿತರ ಬದುಕಿನ ಬದಲಾವಣೆಗೆ, ಬಂಧನದ ಬಿಡುಗಡೆಗೆ ಹವಣಿಸುತ್ತಿದ್ದಾರೆ ಎನಿಸುತ್ತದೆ.

ಹೀಗೆ ಕವಿ ಸಿದ್ಧಲಿಂಗಯ್ಯನವರು ತಮ್ಮ ಕವನ ಸಂಕಲನಗಳಾದ 'ಹೊಲೆಮಾದಿಗರ ಹಾಡು' 'ಸಾವಿರಾರು ನದಿಗಳು', 'ಕಪ್ಪುಕಾಡಿನ ಹಾಡು' ಸಂಕಲನದಲ್ಲಿ ದಲಿತರ ಬದುಕಿನ ಬವಣೆಯನ್ನು ಅವರ ಅಸಹಾಯಕ ಸ್ಥಿತಿಯನ್ನು ಚಿತ್ರಿಸುತ್ತಾರೆ. ಅಂತಹ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಲು ಅಣಿಗೊಳಿಸುತ್ತಾರೆ. ದಲಿತರು ತಮ್ಮ ವಿಮೋಚನೆಯನ್ನು ಹೇಗೆ ಮಾಡಿಕೊಳ್ಳಬೇಕು ಎಂಬುದನ್ನು ತುಂಬಾ ರೋಷವೇಶವಾಗಿ ತಮ್ಮ ಕವನಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ದಲಿತರ ವಿಮೋಚನೆಯ ಜೊತೆಗೆ ಕಾರ್ಮಿಕರ ರೈತರ ವಿಮೋಚನೆಯೂ ಆಗಬೇಕೆಂಬುದು ಕವಿಯ ಬರವಣಗೆಯ ತುಡಿತವಾಗಿದೆ. ಕವಿಗೆ ಇಂತಹ ವಿಮೋಚನೆಯ ತುಡಿತಗಳು ಉಂಟಾಗಲು ಮೂಲ ಸೆಲೆಯೇ ಕಮ್ಯುನಿಸ್ಟ್‌ವಾದ, ಅಂಬೇಡ್ಕರ್ ವಾದ, ಪೆರಿಯಾರ್‌ವಾದ, ಮಹಾತ್ಮ ಪುಲೆಯವರ ಸಾಮಾಜಿಕ ಕಳಕಳಿಗಳು, ಎಲ್ಲವೂ ಪ್ರಭಾವ

ಬೀರತೊಡಗಿದವು. ಜಾತೀ ವ್ಯವಸ್ಥೆ ದೂರವಾಗಬೇಕಾದರೆ ಮೊದಲು ಅಂತರ್‌ಜಾತಿ ವಿವಾಹಕ್ಕೆ ಆದ್ಯತೆ ನೀಡಬೇಕೆಂಬುದು ಕವಿಯ ಬರವಣಿಗೆಯ ಮತ್ತೊಂದು ಧ್ಯೇಯವಾಗಿದೆ. ಡಾ.ಸಿದ್ಧಲಿಂಗಯ್ಯನವರೆ ಹೇಳುವಂತೆ 'ಮೇಲುಜಾತಿ ಮತ್ತು ಕೆಳಜಾತಿ ವಿವಾಹಕ್ಕೆ ಆದ್ಯತೆ ಕೊಡುವುದರ ಜೊತೆಗೆ ಬೇರೆ ಬೇರೆ ಜಾತಿಗಳಲ್ಲಿ ವಿವಾಹ ಆಗುವಂತವರಿಗೆ ಮೀಸಲಾತಿಯನ್ನು ಜಾರಿಗೊಳಿಸುವ ಮೂಲಕ ಜಾತಿರಹಿತ ಮೀಸಲಾತಿಯನ್ನು ತಂದು ಸಮಾಜವನ್ನು ಜಾತಿಯಿಂದ ಮುಕ್ತಗೊಳಿಸಬೇಕು.[೪] ಎಂದಿದ್ದಾರೆ. ಇದರಲ್ಲಿ ನಮಗೆ ತಿಳಿಯುವುದೆಂದರೆ ಜಾತಿರಹಿತ ಸಮಾಜ ನಿರ್ಮಾಣ ಮಾಡುವುದು, ದಲಿತ ಮತ್ತು ಶೋಷಿತ ಸಮುದಾಯಗಳಿಗೆ ವಿಮೋಚನೆಯನ್ನು ತೋರಿಸುವುದು ಎಂದೆನಿಸುತ್ತದೆ. ನೆಹರು ಹೇಳುವಂತೆ 'ಜಾತಿ ಪದ್ಧತಿಯು ನಾಶವಾಗಬೇಕಾಗಿರುವುದು ಸಾರ್ವಜನಿಕ ಜೀವನದ ಘಟ್ಟದಿಂದಲ್ಲ. ಬದಲಿಗೆ ಸಮಾಜದಲ್ಲಿ ಬದುಕುತ್ತಿರುವವರ ಮನದಾಳದಿಂದ'[೫] ಎಂದಿದ್ದಾರೆ. ಈ ನಿಟ್ಟಿನಲ್ಲಿ ಇಂದಿನ ಜನ ಸಮುದಾಯ ಯೋಚಿಸಬೇಕಾಗಿದೆ.

ಒಟ್ಟಾರೆಯಾಗಿ ಸಿದ್ಧಲಿಂಗಯ್ಯನವರ ಎಲ್ಲಾ ಕವನಗಳಲ್ಲಿಯು ಒಂದು ರೀತಿಯಲ್ಲಿ ಪ್ರತಿಭಟನಾತ್ಮಕ ಅಂಶಗಳು ಸೇರಿರುವುದರ ಜೊತೆಗೆ ಅದರಿಂದ ಹೇಗೆ ಯಶಸ್ಸನ್ನು ಹೊಂದಬೇಕು. ಬಂಧನದ ಸಂಕೋಲೆಗಳನ್ನು ಕಡಿದೊಗೆದು ಸ್ವತಂತ್ರವಾಗಿ ಹಾರಾಡುವ ಪಕ್ಷಿಗಳಂತೆ ಬದುಕಲು ಉತ್ತಮ ಮಾರ್ಗದರ್ಶನವನ್ನು ನೀಡುವಂತ ಕವನಗಳನ್ನು ರಚಿಸಿದ್ದಾರೆ. ಕರ್ನಾಟಕದಲ್ಲಿ ಇಂದು ದಲಿತರು ಅವರದೇ ಆದ ಐಡೆಂಟಿಟಿಯನ್ನು ಗುರುತಿಸಿಕೊಂಡಿದ್ದಾರೆ. ಅವರಿಗೆ ಅವರದೇ ಆದ ಒಂದು ಭಾಷೆ ಇದೆ ಎಂದಾದರೆ ಅಂದಿನ ಕಾಲಕ್ಕೆ ಸಿದ್ಧಲಿಂಗಯ್ಯನವರ ಮೇಲೆ ಅದೇ ಕಾಲಮಾನದ ಸಾಹಿತಿಗಳು ನೀಡಿದ ಚಿಂತನ ಬರಹಗಳು, ಲೇಖನಗಳು, ಕ್ರಾಂತಿಕಾರಿ ಕಾವ್ಯಗಳು ಅತಿಯಾದ ಪ್ರಭಾವ ಬೀರಿವೆ. ದಲಿತರು ವಿಮೋಚನೆಯನ್ನು ಕಂಡುಕೊಳ್ಳಲು ದಾರಿದೀಪಗಳಾಗಿವೆ ಎಂದು ಹೇಳಬಹುದು.

***ಅಡಿಟಿಪ್ಪಣಿಗಳು***

೧. ಜನಸಂಸ್ಕೃತಿ, ಡಾ. ಸಿದ್ಧಲಿಂಗಯ್ಯ, ಪ್ರಸಾರಾಂಗ, ಹಂಪಿ ವಿ.ವಿ., ಪುಟ-೬೧.
೨. ಅದೇ, ಪುಟ-೬೨
೩. ಅದೇ, ಪುಟ-೬೫
೪. ಅದೇ, ಪುಟ-೭೩
೫. ಅದೇ, ಪುಟ-೭೬

## ಅಧ್ಯಾಯ - ೫

# ಡಾ॥ ಸಿದ್ಧಲಿಂಗಯ್ಯನವರ ಕಾವ್ಯದ ಇಂದಿನ ಪ್ರಸ್ತುತತೆ

ಶತಮಾನಗಳಿಂದಲೂ ಶೋಷಣೆಗೊಳಗಾಗಿ ಅಪಮಾನವನ್ನು ಅನುಭವಿಸುತ್ತ ಕತ್ತಲೆಯ ಕೋಣೆಯೊಳಗೆ ವಾಸಿಸುತ್ತಿದ್ದ ಜನಾಂಗವೇ ದಲಿತರು. ಮನುಧರ್ಮಶಾಸ್ತ್ರ ಸಮಾಜದಲ್ಲಿ ಜಾರಿಯಾದಾಗಿನಿಂದ ದಲಿತರಿಗೆ ವಿದ್ಯೆಯನ್ನು ನಿರಾಕರಿಸಲಾಯಿತು. ಆಸ್ತಿಯ ಒಡೆತನವನ್ನು ಕಿತ್ತುಕೊಂಡು ಮೇಲುವರ್ಗದವರ ಗುಲಾಮರಾಗಿ ಬದುಕುವ ಪರಿಸ್ಥಿತಿ ನಿರ್ಮಾಣವಾಯಿತು. ನಂತರ ೬ನೇ ಶತಮಾನದಲ್ಲಿ ಗೌತಮ ಬುದ್ಧ, ೧೨ನೇ ಶತಮಾನದಲ್ಲಿ ಬಸವಣ್ಣನವರ ಸಮಾಜಪರ ಚಿಂತನೆಗಳಿಂದ ಸ್ವಲ್ಪ ಸುಧಾರಣೆಯನ್ನು ಕಂಡಿತು. ನಂತರ ೨೦ನೇ ಶತಮಾನದವರೆವಿಗೂ ದಲಿತರ, ನೊಂದವರ ಕಣ್ಣೀರೊರೆಸಲು ಯಾವ ನಾಯಕನೂ ಮುಂದಾಗಲಿಲ್ಲ. ೧೯-೨೦ನೇ ಶತಮಾನದ ಕಾಲಘಟ್ಟದಲ್ಲಿ ದಲಿತರ ಪರವಾಗಿ, ಮಹಿಳೆಯರ ಪರವಾಗಿ ಚಿಂತಿಸಿ ಬದಲಾವಣೆಯನ್ನು ತರಲು ಶ್ರಮಿಸಿದವರೆಂದರೆ ಮಹಾತ್ಮಪುಲೆ, ಶಾಹುಮಹಾರಾಜ್, ಅಂಬೇಡ್ಕರ್ ಮತ್ತು ಮೈಸೂರಿನ ಅರಸರಾದ ನಾಲ್ವಡಿ ಕೃಷ್ಣರಾಜ ಒಡೆಯರು. ಇವರ ಕಾಲಘಟ್ಟದಲ್ಲಿಯೇ ಸಾಂಸ್ಕೃತಿಕವಾಗಿ ದಕ್ಷಿಣ ಭಾರತದಾದ್ಯಂತ ಸಮಾಜ ಪರಿವರ್ತನೆಯ ಚಳುವಳಿಯನ್ನು ಪ್ರಾರಂಭಿಸಿದವರು ಪೆರಿಯಾರ್‌ರವರು.

ಸಮಾಜದಲ್ಲಿನ ಅಸಮಾನತೆಯನ್ನು ಹೋಗಲಾಡಿಸಲು ಕಾಲದಿಂದ ಕಾಲಕ್ಕೆ ಒಬ್ಬೊಬ್ಬ ಸುಧಾರಕರು ಒಂದು ಸಮಾಜಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಆದರೆ ದಲಿತರಿಗೆ ಸಂವಿಧಾನಿಕವಾಗಿ ಶಾಶ್ವತವಾದ ಪರಿಹಾರ ಮಾರ್ಗವನ್ನು ಕೊಟ್ಟವರು ಡಾ. ಅಂಬೇಡ್ಕರ್‌ರವರು. ಇವರು ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಉದ್ಯೋಗದಲ್ಲಿ ಪ್ರಮುಖವಾದ ಬದಲಾವಣೆಯನ್ನು ದಲಿತರಿಗಾಗಿ ಮಾರ್ಪಡಿಸಿದರು. ಇವರ ಈ ಮಾರ್ಪಾಡುಗಳು ದಲಿತ ಸಮುದಾಯದೊಳಗೆ ಹೊಸ ಜೀವನ ಪದ್ಧತಿಯನ್ನು ಕಂಡುಕೊಳ್ಳಲು ಸಾಧ್ಯವಾಯಿತು. ಆದರೆ ದಲಿತರು ಸಾಮಾಜಿಕವಾಗಿ ಇಡೀ ದೇಶದಾದ್ಯಂತ ಅಸಮಾನತೆಯನ್ನು ಅವಮಾನವನ್ನು ಅನುಭವಿಸುತ್ತಲೇ ಬಂದರು.

ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಭಾರತೀಯರೆಲ್ಲರೂ ಬ್ರಿಟೀಷರನ್ನು ಈ ದೇಶದಿಂದ ಹೊರಗಟ್ಟಿದರೆ ಈದೇಶದ ಪರಿಸ್ಥಿತಿ ಬದಲಾಗುತ್ತದೆ ಎಂದು ಕೊಂಡಿದ್ದರು. ಆದರೆ ಸ್ವಾತಂತ್ರ್ಯ ಬಂದು ಸುಮಾರು ೨೫-೩೦ವರ್ಷಗಳು ಕಳೆದರೂ ದಲಿತರು ಇನ್ನು ಅಸ್ಪೃಶ್ಯತೆಯ ಆಚರಣೆಯ ಬಲೆಯೊಳಗೆ ಸಿಲುಕಿ ಬದುಕುತ್ತಿದ್ದರು. ಸ್ವತಂತ್ರ ಭಾರತದಿಂದ ತಮ್ಮ ವಿಮೋಚನೆ ಸಾಧ್ಯ ಎಂದುಕೊಂಡು ಕನಸಿನ ಭ್ರಮೆಯಲ್ಲಿ ಬದುಕುತ್ತಿದ್ದ ಭಾರತೀಯ ಅಸ್ಪೃಶ್ಯರಿಗೆ, ಸ್ವಾತಂತ್ರ್ಯ ಭಾರತದ ಕಲ್ಪನೆಯ ಕನಸು ಕನಸಾಗಿಯೇ ಉಳಿಯಿತು. ಹಲವು ದಲಿತ ಪರ ಚಿಂತಕರು ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕಿಂತ ಇನ್ನೊಂದಷ್ಟು ವರ್ಷ ಬ್ರಿಟೀಷರೆ ಆಳ್ವಿಕೆ ಮಾಡಿದ್ದರೆ ಚೆನ್ನಾಗಿತ್ತು ಎಂದು ಆಲೋಚಿಸುವಂತಾಯಿತು.

ಭಾರತಕ್ಕೆ ಸ್ವಾತಂತ್ರ್ಯ ಬಂದು ಸುಮಾರು ೨೫-೩೦ ವರ್ಷಗಳು ಕಳೆದರೂ ದಲಿತರ ಬದುಕಿನಲ್ಲಿ ಸ್ವಲ್ಪವೂ ಬದಲಾವಣೆಯನ್ನು ಕಾಣದಾಯಿತು. ಸಂವಿಧಾನದಲ್ಲಿ ಅಳವಡಿಸಿದ್ದ ದಲಿತರ ಪರವಾದ ಕಾಯಿದೆಗಳು ಒಂದೂ ಜಾರಿಯಾಗಲಿಲ್ಲ. ಏಕೆಂದರೆ ಸಂವಿಧಾನ ಜಾರಿ ಮಾಡುವ ಜಾಗದಲ್ಲಿ ಸಂವಿಧಾನದ ವಿರೋಧಿಗಳು ಕುಳಿತಿರುವುದು. ಈ ಕಾರಣದಿಂದ ದಲಿತರ ಬದುಕಿನಲ್ಲಿ ಬದಲಾವಣೆಯೇ ಇಲ್ಲವಾಯಿತು.

೭೦ರ ದಶಕದ ಹೊತ್ತಿಗೆ ದೇಶದಾದ್ಯಂತ ದಲಿತರ ಪರವಾದ ಚಳುವಳಿಗಳು, ಹೋರಾಟಗಳು ಪ್ರಾರಂಭವಾದವು. ದಲಿತರ ಈ ಹೋರಾಟಗಳಿಗೆ ಅಂಬೇಡ್ಕರ್‌ರವರ ಸಿದ್ಧಾಂತಗಳೇ ಸ್ಫೂರ್ತಿಯಾಗತೊಡಗಿದವು. ದೇಶದಾದ್ಯಂತ ಅಂಬೇಡ್ಕರವರ ಸಿದ್ಧಾಂತಗಳನ್ನೊತ್ತ ದಲಿತ ಚಳುವಳಿಗಳು ದಲಿತರನ್ನು ಒಂದು ವೇದಿಕೆಗೆ ತರಲು ಪ್ರಾರಂಭಿಸಿದವು. ಅದೇ ಸಂದರ್ಭಕ್ಕೆ ಕರ್ನಾಟಕದಲ್ಲಿ ಮೊದಲ ತಲೆಮಾರಿನ ದಲಿತ ಬರಹಗಾರರಾದ ದೇವನೂರು ಮಹಾದೇವ, ಮುನಿವೆಂಕಟಪ್ಪ, ದೇವಯ್ಯ ಹರವೆ ಪ್ರೊ॥ ಬಿ. ಕೃಷ್ಣಪ್ಪ, ಬಿ. ಬಸವಲಿಂಗಪ್ಪ (ರಾಜಕಾರಣಿ) ಮತ್ತು ಡಾ. ಸಿದ್ಧಲಿಂಗಯ್ಯನಂತಹ ವರೆಲ್ಲರೂ ಕರ್ನಾಟಕದಲ್ಲಿಯೂ ದಲಿತರ ಪರವಾದ ಚಳುವಳಿಗೆ ನಾಂದಿ ಹಾಡಿದರು.

ಕರ್ನಾಟಕದಲ್ಲಿ ದಲಿತ ಚಳುವಳಿ ಹುಟ್ಟುತ್ತಿದ್ದಂತೆಯೇ ಅದಕ್ಕೆ ಇಂಬು ಕೊಡುವಂತಹ ಸಾಹಿತ್ಯವೂ ಸೃಷ್ಟಿಯಾಗತೊಡಗಿತು. ಈ ಸಾಹಿತ್ಯವು ಇದುವರೆಗೂ ರಚಿತವಾಗಿದ್ದಂತಹ ಸಾಹಿತ್ಯ ಭಾಷಾ ಶೈಲಿಗಿಂತ ಭಿನ್ನಶೈಲಿಯಲ್ಲಿ, ದಲಿತರ ಆಡು ಮಾತಿನ

ರೀತಿಯಲ್ಲಿಯೇ ರಚಿತವಾಗತೊಡಗಿತು. ಇದರಿಂದ ನಾಡಿನಾದ್ಯಂತ ದಲಿತ ಚಳುವಳಿ ಮತ್ತಷ್ಟು ತೀವ್ರತೆಯನ್ನು ಪಡೆಲು ಸಾಧ್ಯವಾಯಿತು. ಅಂತಹ ವಿಶಿಷ್ಟವಾದ ಭಾಷಾ ಶೈಲಿಯನ್ನು ಒಳಗೊಂಡ ಸಾಹಿತ್ಯವೇ ಸಿದ್ಧಲಿಂಗಯ್ಯನವರ ಸಾಹಿತ್ಯ.

೭೦ರ ದಶಕದಲ್ಲಿ ಬಂದ ಇವರ ಸಾಹಿತ್ಯವೂ ಇದುವರೆಗೂ ಮೂಕರಾಗಿದ್ದ ದಲಿತ ಜನಾಂಗಕ್ಕೆ ಧ್ವನಿಗೂಡಿಸುವ ಸಾಹಿತ್ಯವಾಗಿಯೂ, ಶಕ್ತಿಹೀನರಾಗಿದ್ದವರ ತೋಳುಗಳಲ್ಲಿ ಶಕ್ತಿ ತುಂಬುವ ಸಾಹಿತ್ಯವಾಗಿಯೂ, ದಿಕ್ಕೇ ತೋಚದಿದ್ದ ಜನರಿಗೆ ದಾರಿದೀಪವಾಗಿಯೂ, ಮಾನಸಿಕವಾಗಿ ಹೀನರಾಗಿದ್ದ ಜನರಿಗೆ ಸ್ಫೂರ್ತಿಯನ್ನು ತುಂಬುವ ಸಾಹಿತ್ಯವಾಗಿ ಹೊರಹೊಮ್ಮಿತು. ಈ ರೀತಿಯ ಸಾಹಿತ್ಯದ ಬರವಣಿಗೆ ದಲಿತರನ್ನು ಬಡಿದೆಬ್ಬಿಸುತ್ತಾ ವ್ಯವಸ್ಥೆಯ ವಿರುದ್ಧ ಹೋರಾಡಲು ಅಣಿಗೊಳಿಸಿತು. ಸಿದ್ಧಲಿಂಗಯ್ಯನವರೆ ಸ್ವತಃ ತಾವೇ ಬರೆದ ಸಾಹಿತ್ಯವನ್ನು ಹಳ್ಳಿ ಹಳ್ಳಿಗೂ ಹೋಗಿ ಹಾಡತೊಡಗಿದ್ದರಿಂದ ಅವರೇ ಒಂದು ರೀತಿಯಲ್ಲಿ ದಲಿತರ ಪಾಲಿನ ಆಶಾಕಿರಣವಾಗಿ ಕಾಣಿಸಿಕೊಳ್ಳತೊಡಗಿದರು. ಇದರಿಂದ ದಲಿತರು ಬದುಕಿನಲ್ಲಿ ಭರವಸೆಗಳನ್ನಿಟ್ಟುಕೊಂಡು ವ್ಯವಸ್ಥೆಯನ್ನು ಸರಿದೂಗಿಸಲು ಸನ್ನದ್ಧರಾದರು.

ಕವಿಯು ಒಬ್ಬ ದಲಿತ ಸಾಹಿತಿಯಾಗುವುದಕ್ಕೆ ಮುಖ್ಯ ಕಾರಣವೇ ಆತ ದಲಿತನಾದ್ದರಿಂದ ತನ್ನ ವರ್ಗಕ್ಕೆ ಸಮಾಜದಲ್ಲಿ ಆಗುವ ದೌರ್ಜನ್ಯ, ದಬ್ಬಾಳಿಕೆ, ಅನ್ಯಾಯ, ಶೋಷಣೆ, ಜಾತೀಯತೆ, ಇವುಗಳೇ ಕವಿಯನ್ನು ಹುರಿದುಂಬಿಸಿದವು.[೧] ಅದನ್ನು ಕವಿ ಸಾಹಿತ್ಯದ ಮೂಲಕ ಪ್ರತಿಕ್ರಿಯಿಸತೊಡಗಿದರು. ಸುಮಾರು ೭೦ರ ಕಾಲಘಟ್ಟದಲ್ಲಿ ಬರೆದ ಕವಿಯ ಬರವಣಿಗೆಯು ದಿಕ್ಕೇ ತೋಚದೆ ಕುಳಿತಿದ್ದ ಜನರಿಗೆ ತುಂಬಾ ಅನಿವಾರ್ಯವಾಗಿತ್ತು ಮತ್ತು ಅಗತ್ಯವಾಗಿತ್ತು ಆದರೆ ಕವಿಯು ತನ್ನ ಮೊದಲನೇ ಕವನ ಸಂಕಲನವನ್ನು ಪ್ರಕಟಿಸಿದ ಸಂದರ್ಭದಲ್ಲಿದ್ದ ರೋಷ, ಆವೇಶ ಸಿಟ್ಟು ಆಕ್ರೋಶಗಳು ಇವತ್ತಿನ ಕಾಲಘಟ್ಟಕ್ಕೆ ಏನಾದವು? ಇವತ್ತಿನ ಕಾಲಘಟ್ಟಕ್ಕೆ ಎಷ್ಟು ಪ್ರಸ್ತುತವಾಗಿವೆ? ಎಂಬುದನ್ನು ಅರಿಯಬೇಕಾಗಿದೆ.

ದಲಿತ ಸಾಹಿತ್ಯ ಬರವಣಿಗೆಯ ಕಾಲಕ್ಕೆ ಕವಿಯ ಕವನಗಳು ಕರ್ನಾಟಕದ ಯಾವುದಾದರೂ ಒಂದು ಹಳ್ಳಿಯ ವೇದಿಕೆಯಲ್ಲಿ ಹಾಡಲಾಗುತ್ತಿದೆ ಎಂದರೆ ಇಡೀ

ನಾಡಿನ ದಲಿತರ ಮನಗಳೆಲ್ಲವೂ ಪುಳಕಗೊಳ್ಳುತ್ತಿದ್ದವು. ಜೊತೆಗೆ ಮೇಲ್ ಜಾತಿಯ ಜನಗಳ ಹೃದಯಗಳು ವೇಗವಾಗಿ ಬಡಿದುಕೊಳ್ಳತೊಡಗಿದ್ದವು. ಮೇಲ್ ಜಾತಿಯ ಜನರು ದಲಿತರನ್ನು ಶಿಕ್ಷಿಸಿದರೆ ಇಡೀ ದಲಿತ ಸಮುದಾಯವೇ ಒಂದಾಗಿ ನಮಗೆ ಶಿಕ್ಷೆಯನ್ನು ಕೊಡಿಸುತ್ತದೆ ಎಂಬ ಭಯದಲ್ಲಿದ್ದರು. ಆದರೆ ಇಂದು ಸಿದ್ಧಲಿಂಗಯ್ಯನವರ ಯಾವುದೇ ಕ್ರಾಂತಿಯ ಗೀತೆಯನ್ನು ಹಾಡಿದರೂ ಅವನ್ನು ಲೆಕ್ಕಿಸದೆಯೇ ದಲಿತರ ಮೇಲೆ ದೌರ್ಜನ್ಯಗಳು ನಡೆಯುವಂತಾಗಿದೆ.

ದಲಿತರ ಮೇಲೆ ಇಂದಿಗೂ ನಡೆಯುತ್ತಿರುವ ಕೆಲವು ದೌರ್ಜನ್ಯಗಳನ್ನು ತಿಳಿಸುವುದಾದರೆ 'ಕಂಬಾಲಪಲ್ಲಿಯ ದಲಿತರ ಸಜೀವ ದಹನ, ಹಂಗರಳ್ಳಿಯ ಜೀತ ಪ್ರಕರಣ, ಬೆಂಡಿಗೇರಿಯಲ್ಲಿ ದಲಿತರಿಗೆ ಮಲ ತಿನ್ನಿಸಿರುವ ನಿದರ್ಶನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ' ಇವರ ಬರವಣಿಗೆ ನಿಜವಾಗಿಯೂ ದಲಿತರ ಬದುಕಿನಲ್ಲಿ ಬದಲಾವಣೆ ಬಯಸಿದ್ದೇ ಆದರೆ ಇಂತಹ ಪ್ರಕರಣಗಳನ್ನು ತಡೆಯುವ ಶಕ್ತಿ ಖಂಡಿತವಾಗಿಯೂ ಇರುತ್ತಿತ್ತು.

ದಲಿತ ಕಾವ್ಯ ದಲಿತರಲ್ಲಿ ಕೇವಲ ಅಸಹಾಯಕತೆಯನ್ನು ಮತ್ತು ಅಸಾಧ್ಯತೆಯನ್ನು ತೋರಿಸುವ ಕಾವ್ಯವಾಗಿ ಹೊರಹೊಮ್ಮಿತು ಎಂದು ಹೇಳಬಹುದು. ಏಕೆಂದರೆ ಸಿದ್ಧಲಿಂಗಯ್ಯನವರ ಅನುಯಾಯಿಗಳು ಅವರನ್ನೇ ಅನುಸರಿಸಿ ಬರೆದ ಕೆಲವು ಕವಿತೆಗಳೂ ಸಹ ದಲಿತರಲ್ಲಿ ನಿರಾಶೆಯನ್ನು ತುಂಬುವಂತಹುಗಳಾಗಿವೆ. ಅಂಬೇಡ್ಕರ್‌ರವರು ದಲಿತರ ವಿಮೋಚನೆಗೆಂದು ಶಾಶ್ವತವಾಗಿ ತೀರ್ಮಾನ ತೆಗೆದುಕೊಂಡಿರುವಂತೆ, ಕವಿಯು ಬರಹದಲ್ಲಿ ಎಲ್ಲಿಯೂ ಇಂತಹ ತೀರ್ಮಾನವನ್ನು ತೆಗೆದುಕೊಂಡಿಲ್ಲ.

ಇವರ ದಲಿತರ ಕುರಿತಾದ ಬರಹಗಳು ದಲಿತರನ್ನು ವಿಮೋಚನೆಗೊಳಪಡಿಸುವ ಸಾಹಿತ್ಯವಾಗಿದ್ದರೆ 'ಎನ್.ಸಿ.ಆರ್.ಬಿ. ಯು ಸಮೀಕ್ಷೆ ಮಾಡಿರುವಂತೆ ಪ್ರತಿದಿನಕ್ಕೆ ಮೂರು ದಲಿತ ಮಹಿಳೆಯರ ಮೇಲೆ ಅತ್ಯಾಚಾರ ಒಬ್ಬ ದಲಿತನ ಕೊಲೆ ನಡೆಯಲು ಸಾಧ್ಯವಾಗುತ್ತಿತ್ತೆ? ಎಂಬುದು ಇಂದಿನ ದಲಿತಪರ ಚಿಂತಕರ ಪ್ರಶ್ನೆಯಾಗಿದೆ. ಅಂದರೆ ಇಡೀ ದೇಶವನ್ನೇ ನಾವು ಉದಾಹರಣೆಯಾಗಿ ತೆಗೆದುಕೊಂಡರೆ ಪ್ರತಿ ೧೮ ನಿಮಿಷಗಳಿಗೆ ಒಬ್ಬ ದಲಿತನ ಮೇಲೆ ಹಲ್ಲೆ ನಡೆಯುತ್ತಿರುವುದನ್ನು ತಡೆಯುವ ಶಕ್ತಿ ಇರುತ್ತಿತ್ತು. ಇಡೀ

ದೇಶದಲ್ಲಿ ೧೭ಕೋಟಿ ಜನರಿರುವ ದಲಿತರು ಬಡವರಾಗಿ ನಿರ್ಗತಿಕರಾಗಿ ಹಸಿವಿನಿಂದ ನರಳುವ ಅನಕ್ಷರಸ್ತರಾಗಿರುವವರಿಗೆ[೩] ಸಿದ್ಧಲಿಂಗಯ್ಯನಂತಹವರ ಬರವಣಿಗೆಯ ಇಂದಿನ ಪ್ರಾಮುಖ್ಯತೆಯಾದರೂ ಏನು ? ಎಂದೆನಿಸುತ್ತದೆ.

ಇವರು ಬರೆದಂತಹ ಬರವಣಿಗೆ, ನಡೆಸಿದಂತಹ ಚಳುವಳಿಗಳಿಂದ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯ, ದಬ್ಬಾಳಿಕೆಗಳು ಆಕ್ರಮಣಗಳು ನಿಲ್ಲಬೇಕಾಗಿತ್ತು. ಆದರೆ ಇಂದು ಜಾತಿ, ಧರ್ಮದ ಹೆಸರಿನಲ್ಲಿ ಅಂದಿನ ಬರವಣಿಗೆಯ ಕಾಲಕ್ಕಿಂತ ಹೆಚ್ಚಾಗಿ ಅಮಾನುಷವಾಗಿ ಕ್ರೌರ್ಯದ ರೀತಿಯಲ್ಲಿಯೇ ಆಕ್ರಮಣಗಳು ನಡೆಯುತ್ತಿವೆಯಿಂದಾದರೆ ಇವರ ಬರವಣಿಗೆ ಮತ್ತು ಚಳುವಳಿಗೆ ೭೦ರ ದಶಕ ಸೂಕ್ತವಾಗಿತ್ತೇ ಹೊರತು ಇಂದು ಅವರ ಸಾಹಿತ್ಯ ಮತ್ತು ಹೋರಾಟಕ್ಕೆ ಸೂಕ್ತ ಸಮಯವಲ್ಲ ಎನಿಸುತ್ತದೆ.

ಕವಿಯ ತನ್ನ ಬರವಣಿಗೆಯ ಕಾಲದಲ್ಲಿ ವ್ಯವಸ್ಥೆಯ ವಿರುದ್ಧ ಎತ್ತಿದ ಪ್ರಶ್ನೆಗಳು ನಂತರದ ತಲೆಮಾರಿನ ಜನರನ್ನು ಸುಧಾರಿಸುವಂತಹ ಅವರ ಬದುಕಿನಲ್ಲಿ ಭರವಸೆ ತುಂಬುವ ಪ್ರಶ್ನೆಗಳಾಗಿರಲಿಲ್ಲ ಎನ್ನಬಹುದು. ಆದರೆ ಅಂದಿನ ಕಾಲದ ದಲಿತ ಜನಾಂಗಕ್ಕೆ ಸಿದ್ಧಲಿಂಗಯ್ಯನವರ ಕಾವ್ಯವು ಸಾಂಸ್ಕೃತಿಕ ನಾಯಕರಾದ ಮಂಟೇಸ್ವಾಮಿ, ಮಹದೇಶ್ವರರು ಸಾಧಿಸಲಾಗದಂತಹ ಲೌಕಿಕ ಮತ್ತುಸಾಮಾಜಿಕ ದಂಗೆಯನ್ನು ಇವರ ಕಾವ್ಯ ಸೃಷ್ಟಿಸಿದೆ.[೪] ಇವರ ಕಾವ್ಯವು ಇವತ್ತಿಗೂ ದಲಿತ ಕೇರಿಗಳಲ್ಲಿ ಮೊಳಗುತ್ತಾ ಕನ್ನಡ ಸಾಹಿತ್ಯದೊಳಗಿನ ಕಾವ್ಯವಾಗಿ ಅದರಲ್ಲಿಯೇ ಲೀನವಾಗಿದೆ. ಆದರೆ ಇವತ್ತಿನ ದಲಿತ ಕವಿಗಳು ಬರೆಯುತ್ತಿರುವ ಕಾವ್ಯಗಳಿಗೆ ಇವರ ಕಾವ್ಯಗಳಲ್ಲಿನ ರೂಪಕ, ಸಂಕೇತ, ಪ್ರತಿಮೆಗಳೆಲ್ಲವೂ ಮರೆಯಲಾರದಂತಹ ವಸ್ತುಗಳಾಗಿವೆ.

ಕವಿಯು ಹೊಲೆಮಾದಿಗರ ಹಾಡು'ನಲ್ಲಿ ಬಳಸಿದ ಭಾಷೆಯನ್ನು ಈಗ ಬಳಸಿದರೆ ಬಹುಶಃ ಕವಿಯೇ ಅದನ್ನು ಒಪ್ಪಿಕೊಳ್ಳಲಾಗದ ಸ್ಥಿತಿಯಾಗಿದೆ. ಏಕೆಂದರೆ ಕವಿಯ ಮನಸ್ಸಿನೊಳಗೆ ಅಂತಹ ಸಿಟ್ಟು ಆಕ್ರೋಶಗಳು ಈಗ ಇಲ್ಲದಿರುವುದಾಗಿದೆ. ಇವತ್ತಿನ ಸಮಾಜಕ್ಕೆ ಕವಿಯ ಕಾವ್ಯಗಳು ಮರು ವ್ಯಾಖ್ಯಾನಕ್ಕೊಳಪಡುವಂತಹ ಅಗತ್ಯತೆಯಿದೆ. ಏಕೆಂದರೆ ಇವತ್ತು ವರ್ಣಾಶ್ರಮ ವ್ಯವಸ್ಥೆ ಶಿಥಿಲಗೊಂಡಿದೆ. ಬ್ರಾಹ್ಮಣನಾದವನು ಬೇರೆ ಬೇರೆ ಉದ್ಯೋಗವನ್ನು ಅವಲಂಭಿಸಿದ್ದಾನೆ. ಕ್ಷತ್ರಿಯನಾದವನು ಶಿಕ್ಷಕನಾಗಿರುವುದನ್ನು

ನೋಡಿದ್ದೇವೆ. ವೈಶ್ಯ ವೈದ್ಯನಾಗಿರುವುದನ್ನು, ಶೂದ್ರ ಸೈನಿಕನಾಗಿರುವುದನ್ನು ನೋಡುತ್ತಿದ್ದೇವೆ[೫] ಅಂದರೆ ಜಾತಿ ವ್ಯವಸ್ಥೆಯ ತಳಹದಿ ಬುಡಮೇಲಾಗುವ ಸ್ಥಿತಿ ಬಂದೊದಗಿರುವುದು ನಮ್ಮೆಲ್ಲರಿಗೂ ಗೋಚರಿಸುತ್ತಿರುವ ಸತ್ಯಾಂಶವಾಗಿದೆ. ಕವಿಯ ನನ್ನ ಜನಗಳು ಕವಿತೆಯಲ್ಲಿ ದಲಿತರ ಬದುಕಿನ ಸ್ಥಿತಿಯನ್ನು ಚಿತ್ರಿಸುತ್ತಿದ್ದಾರೆ. ಆದರೆ ಈ ಕವಿತೆಯನ್ನು ನಾವು ಇವತ್ತಿಗೂ ಪ್ರಸ್ತುತವಾಗಿಸಬಹುದು. ಎಷ್ಟೋ ದಲಿತರು ಒಪ್ಪೊತ್ತಿನ ಊಟಕ್ಕಾಗಿ ಪರದಾಡುವ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಅವರಲ್ಲಿ ಬದುಕಿನ ಭರವಸೆ ತುಂಬಬೇಕಾದರೆ ಇಂತಹ ಕವಿತೆಗಳಿಗೆ ಇಂದಿನ ದಲಿತ ಬರಹಗಾರರು ಜೀವಂತಿಕೆಯನ್ನು ತುಂಬುವುದರಲ್ಲಿ ತಪ್ಪಿಲ್ಲ.

೨೧ನೇ ಶತಮಾನದಲ್ಲಿಯೂ ಸಹ ಜಾತಿ ನಿಂದನೆ, ಹೋಟೆಲುಗಳಿಗೆ ಪ್ರವೇಶವಿಲ್ಲದ ಸ್ಥಿತಿ, ಮುಟ್ಟಿಸಿಕೊಂಡರೆ ಮೈಲಿಗೆಯಾದೀತು ಎನ್ನುವ ಸವರ್ಣೀಯರ ಮನಸ್ಥಿತಿ ಹೇಗೆ ಆಚರಣೆಯಾಗುತ್ತಾ ಬಂದಿದೆಯೋ ಅವುಗಳನ್ನು ತಡೆಹಿಡಿಯಬೇಕೆಂದರೆ ಒಂದು ಚಳುವಳಿ ತುಂಬಾ ಅಗತ್ಯವಾಗಿದೆ. ಅಂತಹ ಚಳುವಳಿ ನಡೆಯಬೇಕೆಂದರೆ ಸಿದ್ಧಲಿಂಗಯ್ಯನಂತವರ ಕಾವ್ಯದ ಅನಿವಾರ್ಯತೆಯಿದೆ. ದಲಿತ ಸಂಘರ್ಷ ಸಮಿತಿಯಂತಹ ಸಂಘಟನೆಗಳು ಇಂದಿಗೂ ದಲಿತರ ಪರವಾಗಿದ್ದು ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯ ಧಬ್ಬಾಳಿಕೆಯನ್ನು ಖಂಡಿಸಲು ಮುಂದಾಗಿವೆಯೆಂದಾದರೆ, ಅಂತಹ ಕಾರ್ಯಕ್ರಮಗಳಿಗೆ ಇವತ್ತಿಗೂ ಸ್ಫೂರ್ತಿ ತುಂಬುತ್ತಿರುವುದು ಇವರ ಕಾವ್ಯಗಳು.

ಇವತ್ತೂ ದಲಿತನಾದವನು ಎಲ್ಲರೆದುರು ಎದೆ ಉಬ್ಬಿಸಿ ನಿಂತು ಗಟ್ಟಿ ಧ್ವನಿಯಲ್ಲಿ ಮಾತನಾಡುತ್ತಿದ್ದಾನೆ, ಅನ್ಯಾಯದ ವಿರುದ್ಧ ಸಿಡಿದೇಳುತ್ತಿದ್ದಾನೆ ಎಂದರೆ ಅದಕ್ಕೆ ಕಾರಣ ಇವರು ಬರೆದ ಹುರುಪು ತುಂಬುವ ಬರವಣಿಗೆ. ಒಂದು ವೇಳೆ ಇಕ್ರಲಾ ವದಿರ್ಲಾ ಎನ್ನುವಂತಹ ಸಾಹಿತ್ಯ ಬರವಣಿಗೆ ಇರದಿದ್ದರೆ ದಲಿತರು ಇನ್ನೂ ಅಂಧಕಾರದಲ್ಲಿ ಬದುಕುವ ಪರಿಸ್ಥಿತಿ ಹಾಗೆಯೇ ಮುಂದುವರೆಯುತ್ತಿತ್ತೇನೋ! ಒಂದು ಕಾಲಕ್ಕೆ ನಗರ ಪ್ರದೇಶಗಳಿಗೆ ಬಂದಾಗ ಜಾತಿ ಹೇಳಿಕೊಳ್ಳಲು ಹಿಂಜರಿಯುತ್ತಿದ್ದವರು. ಇಂದು ತನ್ನ ಜಾತಿಯನ್ನು ನೇರವಾಗಿ ಹೇಳಿಕೊಳ್ಳುತ್ತಿದ್ದಾರೆ ಎಂದರೆ ಅದು ದಲಿತ ಸಾಹಿತ್ಯದ ಧೋರಣೆಯಿಂದ ಪಡೆದ ಸ್ಫೂರ್ತಿಯಾಗಿದೆ.

ದಲಿತ ಸಾಹಿತ್ಯ ಹೊರ ಬರುತ್ತಿದ್ದಂತೆಯೇ ಸಿದ್ಧಲಿಂಗಯ್ಯ ಬಳಸಿದ ಶಿಕ್ಷಣ, ಸಂಘಟನೆ, ಹೋರಾಟ, ಎಂಬ ಅಂಬೇಡ್ಕರ್‌ರವರ ತ್ರಿವಳಿ ಸೂತ್ರಗಳು ಇವತ್ತಿಗೂ ದಲಿತರಲ್ಲಿ ಅಚ್ಚಳಿಯದೆ ಉಳಿದಿರುವುದನ್ನು ಕಾಣಬಹುದು. ಕವಿಯು ತನ್ನ ಕವಿತೆಗಳಲ್ಲಿ ಬಳಸಿರುವ ಪುರೋಹಿತಶಾಹಿ ವ್ಯವಸ್ಥೆ ಅವೈಜ್ಞಾನಿಕ ನಂಬಿಕೆಗಳ ವಿರೋಧದ ನುಡಿಗಳು ಇವತ್ತಿಗೂ ದಲಿತರ ಜಾಗೃತಿಯ ಚಿಲುಮೆಗಳಾಗಲು ಪ್ರಸ್ತುತವಾಗುತ್ತವೆ. ತನ್ನ ಪದ್ಯದಲ್ಲಿ ಬಳಸಿರುವ ಕಮ್ಯುನಿಸ್ಟ್ ಸಿದ್ಧಾಂತದ ಹಿನ್ನೆಲೆಯು ಇವತ್ತಿನ ಕಮ್ಯುನಿಸ್ಟ್‌ವಾದಿಗಳಿಗೆ ಮುಖ್ಯವಾಗುತ್ತವೆ. ಅವರ ಹೋರಾಟಕ್ಕೆ ಇವರ ಕಾವ್ಯ ಇವತ್ತಿಗೂ ಸಹಾಯ ಹಸ್ತವಾಗುತ್ತವೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ರಾಜಕೀಯ ಪುಡಾರಿಗಳ ಭಾಷಣ, ಅವರು ನೀಡುವ ನಡೆಸಿಕೊಡಲಾರದಂತಹ ಆಶ್ವಾಸನೆಗಳು ಕೇವಲ ಓಡಿಗಾಗಿ ಐದು ವರ್ಷಗಳಿಗೊಮ್ಮೆ ತಮ್ಮ ದಲಿತ ಕೇರಿಗಳಿಗೆ ಪ್ರವೇಶ ಮಾಡುವ ಪರಿ, ಅವರಿಗಾಗಿ ಕೈಮುಗಿದು ನಿಲ್ಲುವ ದಲಿತರ ಪರಿಸ್ಥಿತಿ ಇವತ್ತಿಗೂ ನಾಡಿನ ಹಳ್ಳಿ ಹಳ್ಳಿಗಳಲ್ಲಿಯೂ ನಡೆಯುತ್ತಿದೆ ಎಂದಾದರೆ ಕವಿಯ ಕಾವ್ಯ ಇಂದಿಗೂ ಪ್ರಸ್ತುತವಾಗಿದೆ.

ಧರ್ಮ ದೇವರು ದಿಂಡಿರುಗಳ ಹೆಸರಿನಲ್ಲಿ ಪೂಜೆ ಮಂತ್ರ ಜಪತಪದ ಹೆಸರಿನಲ್ಲಿ ಇವತ್ತಿಗೂ ದಲಿತರನ್ನು ಹಳ್ಳಿಗಳಲ್ಲಿ ವಂಚಿಸುತ್ತಿರುವ ಪುರೋಹಿತ ಶಾಹಿ ವ್ಯವಸ್ಥೆಯಿಂದ ದಲಿತರು ಬಿಡುಗಡೆಯಾಗಬೇಕಾದರೆ ಇವರ ಕವಿತೆಗಳು ಬೇಕಾಗಿವೆ. ಇವತ್ತಿಗೂ ದೇಶವನ್ನು ಕಿತ್ತು ತಿನ್ನುತ್ತಿರುವ ವಿದೇಶಿಯರ ಆಕ್ರಮಣ , ಭಾರತಮಾತೆಯನ್ನು ಹೀಯಾಳಿಸುವ ರೀತಿಯನ್ನು ಕವಿಯು ಹೆಣ್ಣನ್ನು ಕ್ರಾಂತಿಯ ಸಂಕೇತವಾಗಿ ಬಳಸಿಕೊಂಡು ಕಾವ್ಯ ಬರೆದಿರುವುದನ್ನು ಗಮನಿಸಬಹುದು. ಅಂತಹ ಆಕ್ರಮಣಗಳನ್ನು ಹತ್ತಿಕ್ಕಬೇಕೆಂದರೆ ಇವರ ಕಾವ್ಯವು ಸ್ಫೂರ್ತಿಯ ಸೆಲೆಯಾಗಿ ಹೊರಹೊಮ್ಮುವ ಅಗತ್ಯತೆಯಿದೆ.

ಕೂಳಿಲ್ಲದೆ ಕೊರಗುವವರು
ನಾವು ಹಸಿದ ಹುಲಿಗಳು
ಮೇಲಿರುವ ಸುಳ್ಳು ಸುಲಿದು
ನೆಗೆಯಲಿರುವ ಕಲಿಗಳು (ನಾವು)

ಈ ಸಾಲುಗಳು ಎಲ್ಲಾ ಕಾಲಕ್ಕೂ ಪ್ರಸ್ತುತವಾಗುತ್ತವೆ. ಬಡತನವು ಈ ದೇಶಕ್ಕಂಟಿರುವ ಬಹುದೊಡ್ಡ ಶಾಪ. ಇದನ್ನು ಹೋಗಲಾಡಿಸಲು ಸಾಧ್ಯವಾಗದು. ಒಂದು ಸಮಸ್ಯೆ ಬಗೆಹರಿದರೆ ಮತ್ತೊಂದು ಹೆಣೆದುಕೊಳ್ಳುವ ಪರಿಸ್ಥಿತಿ ಈ ದೇಶದ ಸ್ಥಿತಿ. ಆದ್ದರಿಂದ ಬಡತನದ ಬೇಗೆಯಲ್ಲಿ ಬೆಂದು ಬಳಲುವವರು ಎಲ್ಲಾ ಕಾಲಕ್ಕೂ ಇದ್ದೇ ಇರುವರು. ಇವರು ಸವಲತ್ತಿಗಾಗಿಯೇ ಹೋರಾಟ ಮಾಡುತ್ತಲೇ ಇರಬೇಕಾಗುತ್ತದೆ. ಹಾಗಾಗಿ ಕವಿಯ ಈ ಬರವಣಿಗೆಯು ಎಲ್ಲಾ ಕಾಲಕ್ಕೂ ಪ್ರಸ್ತುತವಾಗುತ್ತಿರುತ್ತದೆ. ಕವಿಯು ಈ ಸಾಲುಗಳ ಮೂಲಕ ಅಸಮಾನತೆಯ ವಿರುದ್ಧ ಹೋರಾಟ ಮಾಡುವವರಿಗೆ ಜೀವಂತಿಕೆಯನ್ನು ತುಂಬುವಂತಹುದಾಗಿದೆ.

'ಅಂಬೇಡ್ಕರ್' ಕವಿತೆಯನ್ನು ಬರೆಯುವಾಗ ರಾಷ್ಟ್ರನಾಯಕನನ್ನು ಮತ್ತೆ ಪ್ರಶ್ನಿಸುವಂತಹ ಕೆಲಸಕ್ಕೆ ಕವಿ ಕೈ ಹಾಕುತ್ತಿದ್ದಾರೆ. ಆದರೆ ಅಂಬೇಡ್ಕರವರ ಹೋರಾಟದ ಬಗೆಯನ್ನು ತನ್ನ ಕಾವ್ಯದಲ್ಲಿ ಹಿಡಿದಿಟ್ಟಿರುವ ಕವಿ ಅದನ್ನು ಮುಂದಿನ ಪೀಳಿಗೆಗೆ ಸಾಗಿಸುವ ಕೆಲಸ ಮಾಡಿದ್ದಾರೆ.

ಬಾಳಿನಲ್ಲಿ ಕಂಡುಕೊಂಡೆ
ಹೋರಾಟದ ದಾರಿಯ
ಕರೆದುಕರೆದು ತೋರಿಸಿದೆ
ಮಹಾಮನೆಯ ಬಿರುಕನು (ಅಂಬೇಡ್ಕರ್)

ಇಂತಹ ಮಾತುಗಳು ಅಂಬೇಡ್ಕರ್‌ರವರು ಸಮಾಜವನ್ನು ಸರಿದೂಗಿಸಲು ಪಟ್ಟಂತಹ ಶ್ರಮ, ಅವರ ಹೋರಾಟದ ಹಾದಿಯನ್ನು ತಿಳಿಸುತ್ತದೆ. ಮತ್ತು ಎಲ್ಲಿ ತಪ್ಪು ನಡೆದಿವೆ? ಅದನ್ನು ಹೇಗೆ ಸರಿಪಡಿಸಿಕೊಳ್ಳಬೇಕು ಎಂಬುದನ್ನು ತೋರಿಸಿದ್ದಾರೆ, ಎನ್ನುವ ಈ ಸಾಲುಗಳು ಕೇವಲ ಕವಿಯ ಬರವಣಿಗೆಯ ಕಾಲಕಷ್ಟೇ ಸೀಮಿತವಲ್ಲ ಎಲ್ಲಾ ಕಾಲಕ್ಕೂ ಈ ಕಾವ್ಯವು ಬೇಕಾಗಿದೆ ಎಂದು ತಿಳಿಸುತ್ತಾರೆ.

ಯಜಮಾನರ ಬೆತ್ತಗಳಿಗೆ
ಭುಜಬೆನ್ನನು ತೆತ್ತವರೆ
ಬಂದೂಕದ ತುದಿಗೆದೆಯನು
ಒಡ್ಡುವವರೆ ಬನ್ನಿರಿ (ಹಾವುಗಳೇ ಕಚ್ಚಿ)

ಜೀತದಾಳುಗಳಾಗಿರುವ ದಲಿತರನ್ನು ಕ್ರಾಂತಿಯ ಪಥಕ್ಕೆ ಕರೆಯುತ್ತಿರುವುದು ಇವತ್ತಿಗೂ ಪ್ರಸ್ತುತವಾಗುತ್ತದೆ. ಹಂಗರಳ್ಳಿಯಲ್ಲಿ ನಡೆಯುತ್ತಿದ್ದ ಜೀತ ಪ್ರಕರಣದಂತಹ ಘಟನೆಯನ್ನು ಹತ್ತಿಕ್ಕಬೇಕಾದರೆ ದಲಿತಕಾವ್ಯದ ಇಂತಹ ಪದ್ಯಗಳು ಮುಖ್ಯವಾಗುತ್ತವೆ. ಸಾವಿರಾರು ನದಿಗಳು ಎನ್ನುವುದೇ ಇಂದಿಗೆ ಅಗತ್ಯವಾದ ಶೀರ್ಷಿಕೆಯಾಗಿದೆ. ಏಕೆಂದರೆ ಭಂಡರಾಜಕಾರಣಿಗಳು ದಲಿತರ ಕಾರ್ಮಿಕರ, ರೈತರ ಬಗೆಗೆ ತೋರುತ್ತಿರುವ ಧೋರಣೆಗಳನ್ನು ಖಂಡಿಸಬೇಕಾದರೆ ಎಲ್ಲರೂ ಒಂದು ಕಡೆ ಕಲೆತು, ಅನ್ಯಾಯದ ವಿರುದ್ಧ ಪ್ರತಿಭಟಿಸಬೇಕಾದರೆ ಅವರನ್ನೆಲ್ಲ ಒಗ್ಗೂಡಿಸಲು ಇಂದ ಕಾವ್ಯವು ತುಂಬಾ ಅಗತ್ಯ ಮತ್ತು ಪ್ರಸ್ತುತವೆನಿಸುತ್ತದೆ.

> ಅವರ ತೋಟದ ತೆಂಗಿನಲ್ಲಿ
> ನಮ್ಮ ರಕ್ತದ ಎಳನೀರು
> ಅವರ ಅಮಲಿನ ಗುಂಗಿನಲ್ಲಿ
> ಕೂಲಿ ಹೆಣ್ಣಿನ ಕಣ್ಣೀರು (ಬೆಲ್ಜಿಯ ಹಾಡು)

ಎನ್ನುವ ಸಾಲುಗಳಲ್ಲಿ ಭೂಮಾಲೀಕರು ಕಾರ್ಮಿಕ, ದಲಿತ ಹೆಣ್ಣು ಮಕ್ಕಳ ಜೀವನದಲ್ಲಿ ಆಟವಾಡುತ್ತಿರುವುದನ್ನು ಜಮೀನುದಾರರ ತೋಟದಲ್ಲಿ ಜೀತಗಾರರಾಗಿ ದುಡಿಯುತ್ತಿರುವ ದಲಿತರು ನಿಜವಾಗಿಯೂ ಹೊರಬರಬೇಕೆಂದರೆ ಇವರ ಕಾವ್ಯವು ಸ್ಫೂರ್ತಿ ತುಂಬುತ್ತದೆ.

'ಒಂದು ವರ್ಗವು ಮತ್ತೊಂದು ವರ್ಗದ ಮೇಲೆ ದಬ್ಬಾಳಿಕೆ ನಡೆಸಲು ಅಧಿಕಾರವೇ ಮೂಲ ಕಾರಣ. ಒಂದು ವರ್ಗದ ದಬ್ಬಾಳಿಕೆಯನ್ನು ಕೊನೆಗಾಣಿಸಲು ಮತ್ತೊಂದು ವರ್ಗಕ್ಕೆ ಅಧಿಕಾರವು ಬೇಕು. ಎಲ್ಲಾ ಅಧಿಕಾರಗಳ ಕೀಲಿಕೈಯಂತೆ ಇರುವ ರಾಜಕೀಯ ಅಧಿಕಾರವನ್ನು ಕೈಗೆತ್ತಿಕೊಳ್ಳಿ ಎಂದಿರುವ ಅಂಬೇಡ್ಕರವರ ಮಾತಿನ ಮುಂದುವರಿಕೆಯ ಭಾಗವೇ ದಲಿತರ ಬರುವರ ದಾರಿ ಬಿಡಿ ದಲಿತರ ಕೈಗೆ ರಾಜ್ಯಕೊಡಿ' ಎನ್ನುವ ಕವಿಯ ಸಾಲುಗಳು ಎಲ್ಲಾ ಕಾಲಕ್ಕೂ ಪ್ರಸ್ತುತವಾಗಿರಲು ಸಾಧ್ಯ.

'ಹೋರಾಟವೇ ದಾರಿ' ಕವಿತೆಯು ಯಾರು ಅಸಮಾನತೆಯ ಬಲೆಯೊಳಗೆ ಸಿಲುಕಿ, ಅನ್ಯಾಯದ ವ್ಯವಸ್ಥೆಯೊಳಗೆ ಬದುಕುತ್ತಿರುವರೋ ಅವರಿಗೆ 'ಹೋರಾಟವೇ ದಾರಿ'

ಅವರಿಗೆ ತಟಸ್ಥವಾಗಿ ಒಂದು ಕಡೆ ಕುಳಿತುಕೊಳ್ಳಲು ಕವಿ ಕರೆ ಕೊಡದೆ, ಯಾವಾಗಲೂ ನಿಮ್ಮ ಹಕ್ಕುಗಳಿಗಾಗಿ ಸದಾ ಹೋರಾಟ ಮಾಡುತ್ತಿರಬೇಕು ಎಂದು ಹೇಳಿದ್ದಾರೆ. ಈ ಹೋರಾಟ ವೆಂಬುದು ದಲಿತರ ನಿರಂತರ ಬದುಕಿನ ಹೋರಾಟವಾಗಿರುವುದರಿಂದ ಇವತ್ತಿಗೂ ಇಂತಹ ಪದ್ಯದ ಸಾಲುಗಳು ದಲಿತರನ್ನು ಹೋರಾಟದ ದಾರಿಗೆ ಕರೆದೊಯ್ಯುತ್ತವೆ.

ದಲಿತ ಸಮುದಾಯವು ನಾಡಿನಾದ್ಯಂತ ಜೀತದಾಳುಗಳಾಗಿ ಜಮೀನುದಾರರ ಗದ್ದೆಯಲ್ಲಿ ದುಡಿಯುತ್ತಿರುವರು. ತಮಗೊಂದು ತುಂಡುಭೂಮಿ ಇದ್ದಿದ್ದರೆ ಈ ಜೀತಗಾರಿಕೆ ತಪ್ಪುತ್ತಿತ್ತು ಎಂದು ಕನಸು ಕಾಣುವುದನ್ನು ಚೋಮನ ಮಕ್ಕಳ ಹಾಡು' ಕವಿತೆ ಕಟ್ಟಿಕೊಡುತ್ತದೆ. ಕವಿಯು ಕಾರಂತರ ಕಾದಂಬರಿಯಾದ 'ಚೋಮನದುಡಿ' ಯನ್ನು ಆಧಾರವಾಗಿಟ್ಟುಕೊಂಡು ಕಾವ್ಯ ಬರೆದಿದ್ದಾರೆ. ಚೋಮನ ಮಗ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗಿ ಜಾತಿಯಿಂದ ಬಿಡುಗಡೆಗೊಳ್ಳುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಅಂತಹ ಕಾದಂಬರಿ ಆಧಾರಿತವಾಗಿದ್ದ ಇಂತಹ ಕಾವ್ಯವು ದಲಿತರು ದಟ್ಟ ದರಿದ್ರ ವ್ಯವಸ್ಥೆಯನ್ನು ಸೃಷ್ಟಿಸಿರುವ ಹಿಂದೂ ಧರ್ಮವನ್ನು ಧಿಕ್ಕರಿಸ ಬೇಕೆಂದಾದರೆ 'ಚೋಮನದುಡಿ' ಯಂತಹ ಕಾದಂಬರಿ ಇವರ ಕಾವ್ಯವಾದ 'ಚೋಮನ ಮಕ್ಕಳ ಹಾಡು' ಎರಡೂ ಪ್ರಕಾರಗಳು ನಮಗೆ ಉತ್ತಮ ಮಾರ್ಗದರ್ಶನಗಳಾಗಿವೆ.

ದಲಿತಕವಿ ಬರೆಯುವ ಕಾಲಕ್ಕೆ ಹೊರಟಂತಹ ದಲಿತರ ಮೆರವಣಿಗೆ ಇಂದಿಗೂ ಆಕಾಶದಲ್ಲಿ ಮೋಡಗಳು ಹಿಂಡುಹಿಂಡಾಗಿ ಹೊರಡುವ ರೀತಿಯಲ್ಲಿ ಅಸಮಾನತೆಯ ವಿರುದ್ಧ ಸಮರ ಸಾರಲು ಹೊರಟಿದ್ದಾರೆ. ಅಂತಹ ಹೋರಾಟದ ಮೆರವಣಿಗೆ ತನ್ನ ನೋವನ್ನು, ಸಿಟ್ಟನ್ನು, ಆಕ್ರೋಶವನ್ನು ಕೇವಲ ಮಾತುಗಳಲ್ಲಿ ವ್ಯಕ್ತಪಡಿಸದೆ ಇಂದಿಗೂ ಅವುಗಳೆಲ್ಲವುಗಳೂ ಕವಿಯು ಬರೆದಂತಹ ಕಾವ್ಯಗಳಾಗಿಯೇ ಹೊರಹೊಮ್ಮುತ್ತಿವೆ.

ಕವಿಯು ಕಪ್ಪುಕಾಡಿನ ಹಾಡು ಬರೆಯುವ ಹೊತ್ತಿಗೆ ಸಂಘರ್ಷ, ಹೋರಾಟ, ಕ್ರಾಂತಿ ಕಹಳೆಯನ್ನು ಮೊಳಗಿಸುವ ಕಡೆಯಿಂದ ಮುಂದೆ ಸರಿದು ಅವುಗಳ ಜೊತೆಗೆ ಪ್ರೀತಿ, ವಿಷಾದದ ಮನೋಭಾವವನ್ನು ಸಾರಿರುವುದನ್ನು ಗಮನಿಸಬಹುದು. ಈ ಸಂಕಲನವನ್ನು ಬರೆಯುವ ಹೊತ್ತಿಗೆ ಕೇವಲ ದಲಿತ ಸಮುದಾಯದ ನೆಲೆಯಲ್ಲಿ ಇಡೀ ಸಮುದಾಯವನ್ನು

ನೋಡುತ್ತಿದ್ದ ಕವಿ ಈಗ ಇಡೀ ಸಮಾಜದ ಎಲ್ಲಾ ಸಮಸ್ಯೆಗಳಿಗೆ ಸ್ಪಂದಿಸುವ ಗುಣವನ್ನು ಹೊಂದಿರುವುದನ್ನು ಕಾಣಬಹುದು.

ಇಲ್ಲಿ ಕಾಂತಿಗಿಂತ ವಿಶಾದದ, ಕೋರಿಕೆಯ ವ್ಯಂಗ್ಯದ ವಿಡಂಬನೆ ರೀತಿಯ ಪದ್ಯಗಳಾಗಿರುವುದರಿಂದ ಇವು ಕನ್ನಡ ಕಾವ್ಯದಲ್ಲಿ ನುಸುಳುತ್ತವೆ. ಇವರು ಪ್ರಶ್ನಿಸಿರುವಂತಹ ಸ್ವಾತಂತ್ರ್ಯದ ಪರಿಸ್ಥಿತಿಯು ಇವತ್ತಿಗೂ ಹಾಗೆಯೇ ಇದೆ.

ಬಡವರ ಮನೆಗೆ ಬರಲಿಲ್ಲ
ಬೆಳಕಿನ ಕಿರಣ ತರಲಿಲ್ಲ
ಗೋಳಿನ ಕಡಲನು ಬತ್ತಿಸಲಿಲ್ಲ
ಸಮತೆಯ ಹೂವನು ಅರಳಿಸಲಿಲ್ಲ

ಸ್ವಾತಂತ್ರ್ಯ ಬಂದು ಸುಮಾರು ಆರು ದಶಕಗಳು ಕಳೆದರೂ ಸಹ ಇಂದಿಗೂ ದೇಶದಲ್ಲಿ ಸೂರು, ಊಟ, ಮೈತುಂಬ ಬಟ್ಟೆ ಇಲ್ಲದೆ ಬದುಕುತ್ತಿರುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ದೇಶದ ಬಡತನದ ರೇಖೆಯು ಕವಿಯು ಬರೆಯುವ ಕಾಲಕ್ಕಿಂತ ಇವತ್ತು ಹೆಚ್ಚಾಗಿರುವುದರಿಂದ ಕವಿ ಅಂದು ಕೇಳಿರುವ ೪೭ರ ಸ್ವಾತಂತ್ರ್ಯದ ಪ್ರಶ್ನೆ ಇಂದಿಗೂ ಪ್ರಶ್ನೆಯಾಗಿಯೇ ಉಳಿಯುತ್ತಿದೆ.

ಇಂದು ಬಡವರು ದೂರು ಕೊಡಲು ಠಾಣೆಗೆ ಹೋದರೆ ಲಂಚವೆನ್ನುವ ಹೆಸರಿನಡಿಯಲ್ಲಿ ಅವರನ್ನು ಸುಲಿಯುವ ಪೋಲಿಸರು, ಜೀತಗಾರರಿಗೆ ನ್ಯಾಯವಾಗಿ ದುಡಿಮೆಯ ಪ್ರತಿಫಲ ನೀಡದಿರುವ ಜಮೀನುದಾರರು, ಎಲ್ಲರೂ ಇಂದಿನ ವ್ಯವಸ್ಥೆಯೊಳಗೆ ಬೇರು ಬಿಟ್ಟು ಹೆಮ್ಮರದಂತೆ ಬೆಳೆದು ಬಡವರನ್ನು ಕಿತ್ತು ತಿನ್ನುತ್ತಿದ್ದಾರೆ. ಆದ್ದರಿಂದಲೇ ಕವಿ ಈ ಕಾಲಘಟ್ಟಕ್ಕೂ ಬಂದು ನಿಲ್ಲುತ್ತಾರೆ.

ಕವಿಯು ಬರೆದಿರುವಂತಹ ಹೊಲೆಮಾದಿಗರ ಹಾಡು, ಕಪ್ಪುಕಾಡಿನ ಹಾಡು, ಸಾವಿರಾರು ನದಿಗಳು, ಕವನಸಂಕಲನದಲ್ಲಿನ ಕವನಗಳಲ್ಲಿ ಎಲ್ಲಾ ವಿಷಯಗಳು ಕ್ರಾಂತಿಕಾರಿ ಚಿಂತನೆಗಳು, ದಲಿತರ ಬಿಡುಗಡೆಯ ನಿಲುವುಗಳು, ಕವಿಯ ಬರವಣಿಗೆಯ ಶೈಲಿ ಇವತ್ತಿಗೂ ಪ್ರಸ್ತುತವಾಗುತ್ತವೆ. ೭೦ರ ದಶಕದಲ್ಲಿ ದಲಿತರ ಮೇಲೆ ನಡೆಯುತ್ತಿದ್ದಂತಹ ದೌರ್ಜನ್ಯ, ದಬ್ಬಾಳಿಕೆ ಅವಮಾನ, ಶೋಷಣೆ ಅಸ್ಪೃಶ್ಯತೆಯ ಆಚರಣೆ ಎಲ್ಲವೂ ಇವತ್ತಿಗೂ

ನಡೆಯುತ್ತಿವೆ. ಅವುಗಳನ್ನು ಹತ್ತಿಕ್ಕಬೇಕೆನಿಸಿದರೆ ದಲಿತ ಸಾಹಿತ್ಯದ ಅಗತ್ಯತೆ ತುಂಬಾ ಪ್ರಸ್ತುತವಾಗುತ್ತದೆ. ದಲಿತರು ಇಂದು ಪ್ರಶ್ನೆ ಮಾಡುವ ಸಮಾಜದಲ್ಲಿ ನಾವು ಎಲ್ಲರಂತೆ ಸರಿಸಮಾನರಾಗಿ ಬದುಕಬಲ್ಲವರು ಎಂಬ ಧ್ವನಿ ಎದ್ದಿದೆ ಎಂದರೆ ಅದು ಇವರ ಕಾವ್ಯಶೈಲಿಯಿಂದ ಎಂದರೆ ತಪ್ಪಾಗಲಾರದು.

ಧ್ವನಿಯೇ ಹೊರಹೊಮ್ಮದೆ ಉಸಿರುಗಟ್ಟಿದವರಂತೆ ಬದುಕುತ್ತಿದ್ದ ದಲಿತರಿಗೆ ಸಿದ್ಧಲಿಂಗಯ್ಯನವರ ಕಾವ್ಯವೇ ಧ್ವನಿಯಾಯಿತು ಮತ್ತು ದಲಿತ ಕಾವ್ಯ ಪರಂಪರೆಯಂತೆ ಇವತ್ತಿಗೂ ದಲಿತರು ಅದನ್ನು ಬಳಸಲು ಸಾಧ್ಯವಾಯಿತು. ಜೊತೆಗೆ ಇವತ್ತಿಗೂ ಇವರ ಭಾಷೆ ದಲಿತರ ಭಾಷೆಯಾಗಿಯೇ ನೆಲೆ ನಿಲ್ಲಲು ಸಾಧ್ಯವಾಯಿತು. ಇಂದು ದಲಿತರು ನಡೆಸುತ್ತಿರುವ ಎಲ್ಲಾ ವೇದಿಕೆಗಳಲ್ಲೂ ಇವರ ಕಾವ್ಯವೇ ದಲಿತರ ಧ್ವನಿಯಾಗಿ ಹೊರಡುತ್ತಿದೆ. ಆದ್ದರಿಂದ ಇವರ ಕಾವ್ಯಗಳು ದಲಿತರು ತಮ್ಮ ಮೂಲ ಸವಲತ್ತನ್ನು ಪಡೆಯಬೇಕಾದರೆ ಸರ್ಕಾರದ ಮುಂದೆ ನಡೆಸುವ ಪ್ರತಿಭಟನೆಗಳಿಗೆ ಮುಖ್ಯ ಅಸ್ತ್ರಗಳಾಗಿವೆ ಎನ್ನಬಹುದು.

***ಅಡಿಟಿಪ್ಪಣಿಗಳು***

೧. ಬಡವರ ನಗುವಿನ ಶಕ್ತಿ, ಸಂ. ದಂಡಪ್ಪ, ಅಂಕಿತ ಪುಸ್ತಕ, ಪುಟ-೩೦೩
೨. ಸಂವಾದ ಮಾಸಪತ್ರಿಕೆ, ಸೆಪ್ಟೆಂಬರ್ ೨೦೦೯. ಸಂ. ಇಂದೂಧರ ಹೊನ್ನಾಪುರ, ಪುಟ-೩೬
೩. ಅದೇ, ಪುಟ - ೩೭
೪. ನನ್ನ ಜನಗಳು ಮತ್ತು ಇತರ ಕವಿತೆಗಳು, ಡಾ. ಸಿದ್ಧಲಿಂಗಯ್ಯ, ನೊಂದವರ ನಾದ ಮೊಗಳ್ಳಿ ಗಣೇಶ್, ಪುಟ-XXVI
೫. ಜನಸಂಸ್ಕೃತಿ ಡಾ. ಸಿದ್ದಲಿಂಗಯ್ಯ, ಪ್ರಸಾರಾಂಗ, ಹಂಪಿ ವಿ.ವಿ., ಪುಟ-೬೮.

# ಸಾರರೂಪ

ಸುಮಾರು ೭೦ರ ದಶಕದಲ್ಲಿ ಅಸಮಾನತೆಯ ವಿರುದ್ಧ ದಲಿತರು ಸಿಡಿದೇಳುವಂತಹ ಸಾಹಿತ್ಯ ಸೃಷ್ಟಿಯಾಯಿತು. ಹೀಗೆ ಸೃಷ್ಟಿಯಾದ ಸಾಹಿತ್ಯ ತಾವು ಅನುಭವಿಸಿದಂತಹ ನೋವುಗಳು, ತಮ್ಮ ಸಮುದಾಯದ ಮೇಲೆ ಸವರ್ಣೀಯರು ನಡೆಸಿದಂತಹ ಆಕ್ರಮಣಗಳು ಅವುಗಳನ್ನು ಪ್ರತಿರೋಧಿಸುವ ಸಾಹಿತ್ಯವಾಯಿತು. ಜೊತೆಗೆ ಇಂತಹ ಸಾಹಿತ್ಯಕ್ಕೆ ಅಂದಿನ ಇತರ ಬರಹಗಾರರು ದಲಿತ ಸಾಹಿತ್ಯ, ದಲಿತ ಪರವಾದ ಸಾಹಿತ್ಯವೆಂದು ಹಣೆಪಟ್ಟಿ ಕಟ್ಟತೊಡಗಿದರು. ಇಂತಹ ಸಾಹಿತ್ಯ ಬರೆದಂತಹ ಕವಿಗಳನ್ನು 'ದಲಿತ ಕವಿ'ಎಂದು ಕರೆದು ಅವರನ್ನು ಕೇವಲ ದಲಿತರಿಗೆ ಮೀಸಲಾಗಿಡುವಂತಹ ಹುನ್ನಾರಗಳು ನಡೆಯತೊಡಗಿದವು.

ಹೊಲೆಮಾದಿಗರ ಹಾಡು' ಸಂಕಲನವನ್ನು ಪ್ರಕಟಿಸಿದಂತಹ ಸಂದರ್ಭದಲ್ಲಿ ಅಲ್ಲಲ್ಲಿ ನಡೆಯುತ್ತಿದ್ದ ಸಾಹಿತ್ಯ ಸಮಾವೇಶಗಳಿಗೆ ಕವಿಯನ್ನು ಆಹ್ವಾನಿಸಲಾಗುತ್ತಿತ್ತು. ಆದರೆ ಕವಿಯ ಹೆಸರನ್ನು ನಮೂದಿಸುವ ಸಂದರ್ಭದಲ್ಲಿ ಅವರ ಹೆಸರಿನ ಕೆಳಗೆ 'ದಲಿತ ಕವಿ' ಎಂದು ನಮೂದಿಸಲಾಗಿತ್ತು. ಆದರೆ ಸಿದ್ಧಲಿಂಗಯ್ಯನವರು 'ಈ ದಲಿತ ಕವಿ ಅನ್ನೋದಕ್ಕಿಂತ, ಶ್ರೇಷ್ಠಕವಿ, ಪ್ರಸಿದ್ಧ ಕವಿ ಅಂತ ಹಾಕಿದ್ರೂ ಪರವಾಗಿಲ್ಲ. ಈ ದಲಿತ ಕವಿ ಅಂತ ಬೇಡಿ''ಎಂದು ಹೇಳುತ್ತಾರೆ. ಈ ರೀತಿಯಿಂದ ಸಿದ್ಧಲಿಂಗಯ್ಯ ದಲಿತ ಕವಿಯಾಗುವುದಕ್ಕಿಂತ ಹೆಚ್ಚಾಗಿ ಒಬ್ಬ ಕನ್ನಡ ಸಾಹಿತ್ಯದ ಕವಿಯಾಗಿ ನಿಲ್ಲಲು ಬಯಸುತ್ತಾರೆ.

'ಸುಟ್ಟಾವು ಬೆಳ್ಳಿ ಕಿರಣ, ನಲವತ್ತೇಳರ ಸ್ವಾತಂತ್ರ್ಯ, ನಿನ್ನ ಕಣ್ಣಿನ ಮಾತು, ಕಂಡೆ ನನ್ನವಳ ಒಂದು ದಿನ' ಇಂತಹ ಕವನಗಳನ್ನು ಬರೆಯುವುದರ ಮೂಲಕ ಕವಿಯು ದಲಿತಪರವಾದ ಚಿಂತನೆಯಿಂದ ಒಂದು ಹೆಜ್ಜೆ ಮುಂದೆ ಸರಿದು ಪ್ರೀತಿ, ಪ್ರೇಮದ ಕಡೆಗೆ ಮುಖ ಮಾಡುವುದರ ಮೂಲಕ ಕನ್ನಡ ಕವಿಗಳ ಸಾಲಿಗೆ ಸೇರುತ್ತಾರೆ.

ಬರವಣಿಗೆಯ ಕಾಲಘಟ್ಟಕ್ಕೆ ಕವಿಗೆ ತಾನು ಸಮಾಜದೊಳಗಡೆ ನಿಂತು ಅನುಭವಿಸಿದ ಜಾತಿಶೋಷಣೆ ಅಪಮಾನಗಳೇ ಕಾವ್ಯದ ವಸ್ತುವಾದ್ದರಿಂದ ಅಂದಿನ ಅವರ ಬರವಣಿಗೆಯು ದಲಿತರಲ್ಲಿ ಜಾಗೃತಿಯನ್ನು ಮೂಡಿಸುವ, ಅವರ ನಿಜವಾದ ನೋವುಗಳಿಗೆ

ಸಾಂತ್ವನವನ್ನು ಸೂಚಿಸುವ ಕಾವ್ಯಗಳಾಗಿ ಹೊರಹೊಮ್ಮಿದವು. ಆದರೆ ಇಂದು ಜಗತ್ತಿನೊಡನೆ ದಲಿತರು ಸಹ ತಮ್ಮ ವಿಸ್ತಾರತೆಯನ್ನು ಪಡೆದುಕೊಳ್ಳುತ್ತಿರುವುದು ಒಂದು ಸಂತೋಷದ ಸಂಗತಿಯಾಗಿದೆ. ಅದರ ಜೊತೆಗೆ ೬ನೇ ಶತಮಾನದಲ್ಲಿ ಬುದ್ಧ, ೧೨ನೇ ಶತಮಾನದಲ್ಲಿ ಬಸವಣ್ಣ, ೧೬ನೇ ಶತಮಾನದಲ್ಲಿ ಸರ್ವ ಜ್ಞ, ೧೮-೧೯ನೇ ಶತಮಾನದಲ್ಲಿ ಪುಲೆ, ಶಾಹುಮಹಾರಾಜ್, ೨೦ನೇ ಶತಮಾನದಲ್ಲಿ ಅಂಬೇಡ್ಕರ್ ಎಲ್ಲರೂ ಜಾತಿ ವ್ಯವಸ್ಥೆಯ ವಿರುದ್ಧ ಕ್ರಾಂತಿಯ ಸಮರವನ್ನೇ ಸಾರಿದರು.

ಸ್ವಾತಂತ್ರ್ಯ ನಂತರದ ಭಾರತದಲ್ಲಿಯೂ ಸಹ ಹಲವು ದಲಿತ ಪರವಾದ ಚಿಂತಕರು, ಬರಹಗಾರರು ಜಾತಿಪದ್ಧತಿಯ, ಧರ್ಮದ ನಂಬಿಕೆಯ ದೇವರು ದಿಂಡಿರಿನ ಕಂದಾಚಾರದ ಆಚರಣೆಯ ವಿರುದ್ಧ ಸಾಹಿತ್ಯಕವಾಗಿ, ಸಾಮಾಜಿಕವಾಗಿ ಚಳುವಳಿಯನ್ನು ನಡೆಸಿದರು. ಆದರೆ 'ಸಂವಿಧಾನಿಕವಾಗಿ ಸಿಗುತ್ತಿದ್ದ ಸವಲತ್ತುಗಳನ್ನುಪಡೆಯುತ್ತಿರುವ ಇಂದಿನ ದ ಲಿತರು ಮತ್ತೊಮ್ಮೆ ಬ್ರಾಹ್ಮಣೀಕರಣಗೊಳ್ಳುತ್ತಿರುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ. ಅದರಲ್ಲೂ ವಿದ್ಯಾವಂತ ದಲಿತರಲ್ಲಿಯೇ ಇಂತಹ ಸಂಗತಿ ಕಾಣುತ್ತಿರುವುದು ತುಂಬಾ ಅಪಾಯಕಾರಿಯಾದ ವಿಚಾರವಾಗಿದೆ. ದಲಿತರು ಬ್ರಾಹ್ಮಣೀಕರಣಗೊಳ್ಳುತ್ತಿದ್ದಾರೆ ಎಂದರೆ ಅವರು ಮತ್ತೆ ಶೋಷಕರಾಗುತ್ತಿದ್ದಾರೆ ಎಂದರ್ಥ. ಆದ್ದರಿಂದ ದಲಿತರೇ ಮತ್ತೆ ಶೋಷಕ ಮನೋಧರ್ಮವನ್ನು ಒಪ್ಪಿಕೊಂಡಂತಾಗುತ್ತದೆ. ಆದ್ದರಿಂದ ಇವತ್ತಿನ ಕಾಲಘಟ್ಟಕ್ಕೆ ದಲಿತರು ಮತ್ತೆ ಎಚ್ಚೆತ್ತುಕೊಂಡು ಜಾಗರೂಕತೆಯಿಂದ ಬದುಕಬೇಕು ಎಂಬುದು ಕವಿಯ ಮುಖ್ಯ ಆಶಯವಾಗಿದೆ.

ಕವಿಯು ಅಭಿಪ್ರಾಯ ಪಡುವಂತೆಯೇ 'ದಲಿತ ಚಳುವಳಿಯು ಒಂದು ಗುರಿಯನ್ನಿಟ್ಟುಕೊಂಡು ಮುನ್ನಡೆಯಿತು. ಆದರೆ ಅದನ್ನು ತಲುಪಲು ಸಾಧ್ಯವಾಗಲಿಲ್ಲ. ಅದಕ್ಕೆ ನಾಯಕತ್ವದ ಕೊರತೆ ಮತ್ತು ನಿರಾಶೆಯೂ ಕಾರಣವಾಗಿದೆ. ಆದ್ದರಿಂದಲೇ ಸಿದ್ಧಲಿಂಗಯ್ಯನವರ ಸಾಹಿತ್ಯ ಕೇವಲ ದಲಿತರ ಕಣ್ಣೀರಿನ ಕತೆಯನ್ನು ಹೇಳುವ ಸಾಹಿತ್ಯವಾಯಿತೇ ಹೊರತು ಅದಕ್ಕೆ ದಲಿತರ ವಿಮೋಚನೆಯನ್ನು ಮಾಡುವ ಶಕ್ತಿ ಪರಿಪೂರ್ಣವಾಗಿರಲಿಲ್ಲ ಎಂದು ಹೇಳಬಹುದು.

ಜಾತಿಯ ವಿರುದ್ಧ, ಧರ್ಮದ ವಿರುದ್ಧ, ಸಂಪತ್ತಿನ ಅಸಮಾನ ಹಂಚಿಕೆಯ ವಿರುದ್ಧ ಬಂಡವಾಳಗಾರರ ವಿರುದ್ಧ ದನಿ ಎತ್ತಿದ ಇವರ ಕಾವ್ಯ ಎಲ್ಲದಕ್ಕೂ ಸೂಕ್ತ ಪರಿಹಾರ ಹುಡುಕಲು ಅಸಮರ್ಥವಾಯಿತು. ಅಂದಿನ ಕಾಲಕ್ಕೆ ವ್ಯವಸ್ಥೆಯ ವಿರುದ್ಧ ಅವರನ್ನು ಹುರಿದುಂಬಿಸಿತು. ಈ ಹಿನ್ನೆಲೆಯನ್ನೇ ಮುಂದಿಟ್ಟುಕೊಂಡು ಇವತ್ತಿನ ದಲಿತರೂ ಕೂಡಾ ದಲಿತ ಚಳುವಳಿಯ ಸಂಪೂರ್ಣ ತಿಳುವಳಿಕೆಯೊಂದಿಗೆ ಸಂಪೂರ್ಣ ಚೈತನ್ಯದೊಂದಿಗೆ ಅದಮ್ಯ ಗುರಿಯೊಂದಿಗೆ ಹೋರಾಡಬೇಕೆಂದು ಕವಿ ಅಭಿಪ್ರಾಯಪಡುತ್ತಾರೆ.

ಎಲ್ಲರ ವಿಮೋಚನೆಯ ಜೊತೆಜೊತೆಯಲ್ಲಿಯೇ ದಲಿತರ ವಿಮೋಚನೆಯೂ ಸಾಧ್ಯ ಎನ್ನುವ ನಿಟ್ಟಿನಲ್ಲಿ ಕವಿಯು 'ಸಾವಿರಾರು ನದಿಗಳು' ಸಂಕಲನವನ್ನು ಹೊರತಂದರು. ಸಾವಿರಾರು ನದಿಗಳು ಸಂಕಲನಕ್ಕೆ ಕೇವಲ ದಲಿತರ ಬದುಕನ್ನೇ ವಸ್ತುವಾಗಿಸಿಕೊಳ್ಳದೆ ರೈತರ ಭವಣೆಗಳು, ಕಾರ್ಮಿಕರ ಅಸಹಾಯಕ ಬದುಕಿನ ಚಿತ್ರಣ ಎಲ್ಲವನ್ನೂ ಕಾವ್ಯದ ವಸ್ತುವಾಗಿಸಿಕೊಂಡು ಸಮಾಜಪರ ಚಿಂತಕರಾಗಿ ಬರೆಯತೊಡಗಿದರು.

ಕವಿಯ ಕಾವ್ಯದ ಬರವಣಿಗೆಗೆ ಮುಖ್ಯ ಶಕ್ತಿಯಾಗಿದ್ದವರೇ ಪುಲೆ, ಅಂಬೇಡ್ಕರ್, ಪೆರಿಯಾರ್, ಗೌತಮ ಬುದ್ಧ, ಮಾರ್ಕ್ಸ್, ಲೋಹಿಯಾ. ಅವರ ಆದರ್ಶಗಳು ಇಂದಿನ ಕಾಲಘಟ್ಟಕ್ಕೆ ದಿಕ್ಕುತಪ್ಪಿರುವುದನ್ನು ಕಾಣಬಹುದು. ಆರಂಭದಲ್ಲಿ ಕಂಡುಬಂದಂತಹ ದಲಿತರ ಪರವಾದ ಕವಿಯ ಕನಸುಗಳು, ಆಕ್ರೋಶ ಸಿಟ್ಟುಗಳೆಲ್ಲವೂ ಮಾಯವಾಗಿ ಕವಿಯೇ ಅಸಹಾಯಕನಂತೆ ಕೂರುವಂತಹ ಪರಿಸ್ಥಿತಿ ನಿರ್ಮಾಣವಾಗತೊಡಗಿದೆ. ಸಿಟ್ಟಿನಿಂದ ಹತಾಶೆಯೆಡೆಗೆ ಅವರ ಕವನಗಳು ಸರಿದಿರುವುದನ್ನು ನಾವು ಗಮನಿಸಲೂ ಬಹುದು.

ಹೀಗಾಗಿ ಇವರ ಕವನದಲ್ಲಿ ಒಂದು ಕಡೆ ಅಸಹಾಯತೆಯು ಗೋಚರಿಸಿದರೆ ಮತ್ತೊಂದು ಕಡೆ ಅಸಾಧ್ಯತೆಯನ್ನು ತೋರುತ್ತದೆ. ದಲಿತರ ಜೀವನ ಶೈಲಿಯನ್ನು ತಮ್ಮ ಕವನದಲ್ಲಿ ಚಿತ್ರಿಸಿರುವುದು ಅಸಹಾಯಕತೆಯೆನಿಸಿದರೆ ದಲಿತರು ಬರುವರ ದಾರಿ ಬಿಡಿ ದಲಿತರ ಕೈಗೆ ರಾಜ್ಯಕೊಡಿ ಎಂಬುದು ಅಸಾಧ್ಯತೆಯ ವಿಚಾರವಾಗಿದೆ. ಇವರು ಕಾವ್ಯದ ಮೂಲಕ ರಾಜ್ಯಕೊಡಿ ಎಂದಾಕ್ಷಣ ದಲಿತರಿಗೆ ಅಧಿಕಾರ ಸಿಗುವುದು ನಿಜವಾಗಿಯೂ ಇವತ್ತಿನ ರಾಜಕಾರಣಕ್ಕೆ ಅಸಾಧ್ಯವಾದಂತಹ ಮಾತಾಗಿದೆ.

ಒಂದು ಕಾಲದಲ್ಲಿ ಸಿದ್ಧಲಿಂಗಯ್ಯನವರು ರಾಜಕಾರಣಿಗಳನ್ನು ಪೊಳ್ಳು ಭಾಷಣಗಳ ಸರದಾರರು, ಅವರನ್ನು ಮೋರಿಗೆ ತಳ್ಳಿ, ಜನರಿಗೆ ಅವರು ಕೈಮುಗಿಯುತ್ತಿರುವುದನ್ನು ವ್ಯಂಗ್ಯವಾಗಿ ಚಿತ್ರಿಸಿದ್ದಾರೆ. ಆದರೆ ರಾಜಕೀಯವನ್ನೇ ಪ್ರಶ್ನಿಸಿದ ಕವಿ ಸುಮಾರು ೧೨ ವರ್ಷಗಳ ಸಕ್ರಿಯ ರಾಜಕಾರಣಿಯಾಗಿ ತೊಡಗಿಸಿಕೊಂಡದ್ದು. ನಾನು ರಾಜಕಾರಣಿಯಾದಾಗ ಮತ್ತೊಬ್ಬ ದಲಿತ ಬರಹಗಾರ ಇಂತಹ ಪ್ರಶ್ನೆ ಕೇಳಬಹುದು ಎಂದು ಅವರು ಚಿಂತಿಸಲಿಲ್ಲವೇ? ಎಂಬ ಪ್ರಶ್ನೆ ಮೂಡುತ್ತದೆ.

ಪ್ರಸ್ತುತವಾಗಿ ದಲಿತರನ್ನು ಕಾಡುತ್ತಿರುವ 'ಜಾಗತೀಕರಣ, ಖಾಸಗೀಕರಣ, ರಾಜಕೀಯ ಅಸ್ಥಿರತೆ, ಭ್ರಷ್ಟಾಚಾರಗಳು ಹಾಗೂ ಮಾನಸಿಕ ಗೊಂದಲಗಳು ಅವರ ಹೊಸ ಕವಿತೆಗಳ ವಸ್ತುವಾಗಿರುವುದನ್ನು ಗಮನಿಸಿದರೆ ದಲಿತಕಾವ್ಯ ಮತ್ತೆ ಮರು ವ್ಯಾಖ್ಯಾನ ಪಡೆಯುವಂತಹ ಅಗತ್ಯತೆ ತುಂಬಾ ಅನಿವಾರ್ಯವೆನಿಸುತ್ತದೆ.

ಸಾರ್ವಜನಿಕ ಬದುಕಿನಲ್ಲಿ ತಮ್ಮನ್ನು ತಾವು ಗುರುತಿಸಿ ಗೌರವಿಸಿಕೊಂಡ ಕವಿ ಎರಡು ಬಾರಿ ವಿಧಾನಪರಿಷತ್ತಿನ ಸದಸ್ಯರಾಗಿ ಅನುಭವ ಪಡೆಯುತ್ತಿರುವಾಗ, ಅಧಿಕಾರದ ಮಿಂಡರು ಎಂದು ಶಪಿಸಿದ್ದು ಸರಿಯೋ ತಪ್ಪೋ ಎಂದು ವಾಸ್ತವಿಕವಾಗಿ ತಾಳೆ ನೋಡಲು ಸಾಧ್ಯವಾಗಿದೆ. ಈಗ ಕವಿಯು ತನ್ನ ಸಹೋದ್ಯೋಗಿ ರಾಜಕಾರಣಿಗಳ ಬಗ್ಗೆ ಮೃದು ಧೋರಣೆ ತಾಳಿದ್ದಾರೆ ಎನ್ನುವುದರಲ್ಲಿ ಸಂದೇಹವಿಲ್ಲವಾಗಿದೆ. ತಾವೇ ಸೂಚಿಸಿರುವ ಮಿಂಡಗಾರರ ಬಗ್ಗೆ 'ಚ' ಕಾರವನ್ನು ಎತ್ತದೆ ಅವರ ಜೊತೆಗೆ ಬಹುತೇಕ ಶಾಮೀಲಾಗಿದ್ದಾರೆ ಎಂಬುದರಲ್ಲಿ ಸಂಶಯವೇ ಇಲ್ಲ.

ಒಟ್ಟಾರೆಯಾಗಿ ದಲಿತರು ಇಂದು ಸಮಾಜದಲ್ಲಿ ಆಗುತ್ತಿರುವಂತಹ ಹೆಚ್ಚಾದ ಖಾಸಗೀಕರಣ, ಮುಕ್ತಮಾರುಕಟ್ಟೆಯಂತಹ ಹೊಸ ಆರ್ಥಿಕ ನೀತಿಯ ಪರಿಣಾಮವಾಗಿ, ದಲಿತರು ಶೂದ್ರರು ಉದ್ಯೋಗದಿಂದ ಸಮಾನತೆಯ ಸವಲತ್ತಿನಿಂದ ವಂಚಿತ ರಾಗುತ್ತಿದ್ದಾರೆ. ಅಂತಹ ವ್ಯವಸ್ಥೆ ನಿರ್ನಾಮವಾಗಿ ಸಂಪೂರ್ಣವಾದ ಸಮಾನತೆಯ ಯುಗ ಪ್ರಾರಂಭವಾಗಬೇಕೆಂದರೆ ದಲಿತರ ಕಾವ್ಯದ ಪ್ರತಿಭಟನೆ ಶಾಂತ ಸ್ವರೂಪವನ್ನು ಪಡೆಯದೆ, ಹೋರಾಟಗಳು ನಿಲ್ಲದೆ ಹಾಗೆಯೇ ಮುಂದುವರಿಯಬೇಕಾಗಿದೆ.

ಒಂದು ಕಾಲದಲ್ಲಿ ದಲಿತರಿಂದಲೇ ಗುರುತಿಸಿಕೊಂಡಂತಹ ಕವಿಯು ರಾಜಕೀಯ ರಂಗವನ್ನು ಪ್ರವೇಶಿಸಿದ ನಂತರ ದಲಿತರನ್ನು ಮರೆತಿರುವಂತೆ ಕಾಣುತ್ತಾರೆ. ಏಕೆಂದರೆ ಮೊದಲು ಬೀದಿಗಿಳಿದು ಮಾಡಿದ ಅವರ ಕ್ರಾಂತಿಕಾರಿ ಹೋರಾಟ ನಂತರದ ಕಾಲಕ್ಕೆ ಕೇವಲ ಕೃತಿಗಳಿಗೆ ಸೀಮಿತವಾಯಿತು. ಅಂದ ಮಾತ್ರಕ್ಕೆ ಸಿದ್ಧಲಿಂಗಯ್ಯನವರೇ ಬೀದಿಗಿಳಿದು ಹೋರಾಟ ಮಾಡಬೇಕೆಂದು ನನ್ನ ಅಭಿಪ್ರಾಯವಲ್ಲ. ಬದಲಿಗೆ ಹೋರಾಟ ಮಾಡುವ ಬೆಂಬಲಿಗರನ್ನು ಮತ್ತಷ್ಟು ಪ್ರಚೋದಿಸುವ ಕಾರ್ಯಮಾಡಬಹುದಿತ್ತು. ಇದನ್ನು ಕುರಿತು ಕವಿಯನ್ನು ಪ್ರಶ್ನಿಸಿದರೆ ೧೯೮೮ರಿಂದ ೨೦೦೧ರವರೆಗೆ ನಾನು ಶಾಸಕನಾಗಿ ಇದ್ದ ಕಾರಣ ದಲಿತಚಳುವಳಿಯಲ್ಲಿ ಸಂಪೂರ್ಣವಾಗಿ ತೊಡಗಿಸಕೊಳ್ಳಲು ಸಾಧ್ಯವಾಗಲಿಲ್ಲ. ವೇದಿಕೆಗಳಲ್ಲಿ ಕಾರ್ಮಿಕರು ಬಡವರು ಶೋಷಿತರು ಎತ್ತಿದ ಪ್ರಶ್ನೆಗಳನ್ನು ನಾನು ವಿಧಾನಸೌಧದ ಒಳಗೆ ಎತ್ತುತ್ತಿದುದ್ದರಿಂದ ಹೊರಗೆ ದಲಿತ ಚಳುವಳಿ ಮತ್ತು ನನ್ನ ನಡುವೆ ಒಂದು ಅಂತರ ಏರ್ಪಟ್ಟಿರುವುದು ಖಂಡಿತ ಎಂದು ತಿಳಿಸಿದ್ದಾರೆ.★ ಹೀಗೆ ಮಾತನಾಡಿದ ಕವಿ ಖಂಡಿತ ಹೋರಾಟದಿಂದ ದೂರ ಉಳಿದುಕೊಂಡಿದ್ದಾರೆ ಎಂದಾದರೆ ಇವರಿಗೆ ದಲಿತರ ಬಗೆಗೆ ಇದ್ದಂತಹ ಕಾಳಜಿ ಎಷ್ಟು ಎಂಬುದು ಪ್ರಶ್ನೆಯಾಗಿ ಉಳಿಯುತ್ತದೆ.

ಕವಿ ಸಿದ್ಧಲಿಂಗಯ್ಯನವರ ಸಾಹಿತ್ಯ ಬರವಣಿಗೆ ಒಂದು ತೀಕ್ಷ್ಣತೆಯನ್ನು ಹಸಿದವರಿಗೆ ನೋವುಂಡವರಿಗೆ, ಅವಮಾನಿತರಾದವರಿಗೆ ಕ್ರಾಂತಿಕಾರಿ ಮನಸುಳ್ಳ ಯುವಕರಿಗೆ ಸ್ಫೂರ್ತಿಯಾಗಿವೆಯೆಂದೇ ಇವತ್ತಿಗೂ ಹೇಳಬಹುದು. ಕವಿಯ ಬರವಣಿಗೆಯ ಕಾಲ ಬೇರೆಯದೇ ಆಗಿದ್ದರೂ ಇವತ್ತಿನ ಪರಿಸ್ಥಿತಿಯಲ್ಲಿ ದಲಿತರು ಹಾಗೆಯೇ ಬದುಕುತ್ತಿರುವುದರಿಂದ 'ಹೊಲೆಮಾದಿಗರ ಹಾಡಿ' ನಂತಹ ಕವನಗಳು ಮತ್ತೆ ಮತ್ತೆ ದಲಿತ ಲೋಕದ ಒಳಗೆ ಮರು ಧ್ವನಿಯಾಗಬೇಕು. ಸಿದ್ಧಲಿಂಗಯ್ಯನಂತಹ ಕ್ರಾಂತಿಕಾರಿ ಕವಿ ಮತ್ತೆ ಕ್ರಾಂತಿಯ ಕಹಳೆಯನ್ನು ಊದಬೇಕು. ಇದರಿಂದ ದಲಿತರ ವಿಮೋಚನೆಯಾಗಬೇಕು. ಇಂದಿನ ದಲಿತರೂ ಸಹ ಭರವಸೆಯನ್ನಿಟ್ಟುಕೊಂಡು ಬದುಕಬೇಕೆಂಬುದನ್ನು ಅವರ ಎಲ್ಲಾ ಸಂಕಲನದ ಕಾವ್ಯಗಳ ತಿರುಳಿನಿಂದ ತಿಳಿಯಬಹುದು.

---

★ ವಿಜಯಕರ್ನಾಟಕ ದಿನಪತ್ರಿಕೆ, 'ಪಂಚಪ್ರಶ್ನೆ', ೨೬ ಜೂನ್ ೨೦೦೯.

## ಕವಿ ಪರಿಚಯ

| | | |
|---|---|---|
| ಹೆಸರು | : | ಡಾ. ಸಿದ್ಧಲಿಂಗಯ್ಯ |
| ತಂದೆ-ತಾಯಿ | : | ದೇವಯ್ಯ ಮತ್ತು ವೆಂಕಟಮ್ಮ |
| ಊರು | : | ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಮಂಚನಬೆಲೆ |
| ಜನ್ಮ ದಿನಾಂಕ | : | ೧೯೫೪ರ ಫೆಬ್ರವರಿ ೩ |
| ಒಡಹುಟ್ಟಿದವರು | : | ಶಿವಲಿಂಗಮ್ಮ, ಪುಟ್ಟಮ್ಮ, ಯಶೋಧ, ಡಿ. ಶಿವಶಂಕರ, ಡಿ. ರವೀಂದ್ರನಾಥ |

### ವಿದ್ಯಾಭ್ಯಾಸ

ಡಾ. ಸಿದ್ಧಲಿಂಗಯ್ಯನವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮವಾದ ಮಂಚನಬೆಲೆಯ ಸರ್ಕಾರಿ ಶಾಲೆಯಲ್ಲಿ ನಂತರ ಅನಿವಾರ್ಯವಾಗಿ ಬೆಂಗಳೂರಿಗೆ ಪಾದಾರ್ಪಣೆ ಮಾಡಿದ ಇವರ ಕುಟುಂಬದವರು ಸಿದ್ಧಲಿಂಗಯ್ಯನವರನ್ನು ಸರ್ಕಾರಿ ಪ್ರಾಥಮಿಕ ಶಾಲೆ ಮತ್ತು ಮಾಧ್ಯಮಿಕ ಶಾಲೆಯ ಶಿಕ್ಷಣವನ್ನು ಶ್ರೀರಾಮಪುರದ ಸರ್ಕಾರಿ ಶಾಲೆಯಲ್ಲಿ ಕೊಡಿಸಿದರು. ಪ್ರೌಢಶಾಲೆಯ ವಿದ್ಯಾಭ್ಯಾಸ ಮಲ್ಲೇಶ್ವರಂ ಸರ್ಕಾರಿ ಪ್ರೌಢಶಾಲೆಯಲ್ಲಿ, ಪಿ.ಯು.ಸಿ. ಸರ್ಕಾರಿ ಕಲಾ ಕಾಲೇಜಿನಲ್ಲಿ ನಡೆಯಿತು. ಬಿ.ಎ. ಪದವಿಯನ್ನು ಬೆಂಗಳೂರು ವಿಶ್ವವಿದ್ಯಾಲಯದಿಂದ ಪಡೆದರು. ನಂತರ ಜ್ಞಾನಭಾರತಿಯ ಕನ್ನಡ ಅಧ್ಯಯನ ಕೇಂದ್ರದಲ್ಲಿ ಎಂ.ಎ. ಪದವಿ ಪಡೆದು ಡಿ.ಎಲ್. ಎನ್.ರವರಿಂದ ಚಿನ್ನದ ಪದಕ ಪಡೆದರು. ನಂತರ ತಮ್ಮ ಪಿಹೆಚ್.ಡಿ. ಪದವಿಯನ್ನು ಡಾ. ಜಿ.ಎಸ್. ಶಿವರುದ್ರಪ್ಪನವರ ಮಾರ್ಗದರ್ಶನದಿಂದ ಪಡೆದುಕೊಂಡರು.

## ಸಾಹಿತ್ಯ ಕೃಷಿ

### ಕಾವ್ಯ

೧. ಹೊಲೆಮಾದಿಗರ ಹಾಡು, ೧೯೭೫ ಮುಂಗಾರು ಪ್ರಕಾಶನ, ಬೆಂಗಳೂರು

೨. ಸಾವಿರಾರು ನದಿಗಳು, ೧೯೭೫, ಸಮುದಾಯ ಪ್ರಕಾಶನ, ಬೆಂಗಳೂರು

೩. ಕಪ್ಪುಕಾಡಿನ ಹಾಡು, ೧೯೮೨, ಅಜಂತಾ ಪ್ರಕಾಶನ, ಬೆಂಗಳೂರು

೪. ಆಯ್ದ ಕವಿತೆಗಳು, ೧೯೯೭, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೫. ಮೆರವಣಿಗೆ, ೨೦೦೦, ಅಂಕಿತ ಪ್ರಕಾಶನ, ಬೆಂಗಳೂರು

೬. ನನ್ನ ಜನಗಳು ಮತ್ತು ಇತರ ಕವಿತೆಗಳು, ೨೦೦೫, ಕ್ರಾಂತಿಸಿರಿ ಪ್ರಕಾಶನ, ಬೆಂಗಳೂರು

**ನಾಟಕಗಳು**

೧. ಪಂಚಮ ನೆಲಸಮ, ೧೯೮೦, ಪಂಚಮ ಪ್ರಕಾಶನ, ಬೆಂಗಳೂರು

೨. ಏಕಲವ್ಯ, ೧೯೮೬, ಅಜಂತಾ ಪ್ರಕಾಶನ, ಬೆಂಗಳೂರು

**ಪ್ರಬಂಧ**

೧. ಅವತಾರಗಳು, ೧೯೮೩, ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು

**ವಿಮರ್ಶೆ**

೧. ಹಕ್ಕಿನೋಟ, ೧೯೯೧, ಕಲ್ಯಾಣಿ ಪ್ರಕಾಶನ, ಬೆಂಗಳೂರು

೨. ಜನಸಂಸ್ಕೃತಿ, ೨೦೦೭, ಪ್ರಸಾರಾಂಗ, ಹಂಪಿ ವಿ.ವಿ., ಹಂಪಿ

೩. ಉರಿ ಕಂಡಾಯ, ೨೦೦೯, ಅಂಕಿತ ಪ್ರಕಾಶನ, ಬೆಂಗಳೂರು

**ಆತ್ಮಕತೆ**

೧. ಊರುಕೇರಿ ಭಾಗ-೧, ೧೯೯೭, ಅಕ್ಷರ ಪ್ರಕಾಶನ, ಸಾಗರ ಶಿವಮೊಗ್ಗ

೨. ಊರುಕೇರಿ ಭಾಗ-೨, ೨೦೦೬, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು

**ಸಂಶೋಧನೆ**

೧. ಗ್ರಾಮದೇವತೆಗಳು, ೧೯೯೭, ಮೂಲಭಾರತಿ ಪ್ರಕಾಶನ, ಬೆಂಗಳೂರು (ಪಿಹೆಚ್.ಡಿ. ಮಹಾಪ್ರಬಂಧ)

**ಪ್ರಕಟಿತ ಕಥೆಗಳು**

೧. ಮತಾಂತರ, ದಲಿತ ಕಥೆಗಳು, ಸಂ. ಎಲ್. ಹನುಮಂತಯ್ಯ ಮತ್ತು ಬಿ.ಚಿನ್ನಸ್ವಾಮಿ, ೧೯೯೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

## ಗ್ರಂಥಋಣ


೧. ಮೆರವಣಿಗೆ : ಡಾ. ಸಿದ್ಧಲಿಂಗಯ್ಯ,
ಅಂಕಿತ ಪ್ರಕಾಶನ, ೨೦೦೦

೨. ಸಾವಿರಾರು ನದಿಗಳು : ಡಾ. ಸಿದ್ಧಲಿಂಗಯ್ಯ,
ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ೧೯೮೫

೩. ಹಕ್ಕಿನೋಟ : ಡಾ. ಸಿದ್ಧಲಿಂಗಯ್ಯ,
ಕಲ್ಯಾಣಿ ಪ್ರಕಾಶನ, ೧೯೯೦

೪. ಊರುಕೇರಿ ಭಾಗ-೧ : ಡಾ. ಸಿದ್ಧಲಿಂಗಯ್ಯ, ಕನ್ನಡ ಮತ್ತು ಸಂಸ್ಕೃತಿ
ಇಲಾಖೆ, ೨೦೦೬

೫. ಊರುಕೇರಿ ಭಾಗ-೨ : ಡಾ. ಸಿದ್ಧಲಿಂಗಯ್ಯ, ಸಿ.ವಿ.ಜಿ.ಪ್ರಕಾಶನ,
೨೦೦೬

೬. ಬಡವರ ನಗುವಿನ ಶಕ್ತಿ ಸಿದ್ಧಲಿಂಗಯ್ಯ : ಅಪ್ಪಗೆರೆ ಸೋಮಶೇಖರ್,
ಚೇತನ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್, ೨೦೦೭

೭. ದಲಿತ ಕಾವ್ಯ ಕುತೂಹಲ : ಪ್ರೊ॥ ಎಲ್. ರಾಜಶೇಖರಯ್ಯ,
ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ,
೨೦೦೯.

೮. ಉರಿಕಂಡಾಯ : ಡಾ. ಸಿದ್ಧಲಿಂಗಯ್ಯ,
ಅಂಕಿತ ಪುಸ್ತಕ, ೨೦೦೯.

೯. ನನ್ನ ಜನಗಳು ಮತ್ತು ಇತರ ಕವಿತೆಗಳು : ಡಾ. ಸಿದ್ಧಲಿಂಗಯ್ಯ,
ಕ್ರಾಂತಿಸಿರಿ ಪ್ರಕಾಶನ, ೨೦೦೫.

೧೦. ಕನ್ನಡ ಸಾಹಿತ್ಯ ಚರಿತ್ರೆ : ತ.ಸು. ಶ್ಯಾಮರಾಯರು,
ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು

೧೧. ದಲಿತರು, ಭಾಷೆ ಮತ್ತು ಸಮಾಜ : ಸಂ. ಡಾ. ಪಿ.ಮಹದೇವಯ್ಯ,
ಪ್ರಸಾರಾಂಗ, ಹಂಪಿ ವಿ.ವಿ., ೨೦೦೬.

೧೨. ಬಡವರ ನಗುವಿನ ಶಕ್ತಿ : ಸಂ. ದಂಡಪ್ಪ,
ಅಂಕಿತ ಪುಸ್ತಕ, ೨೦೦೧.

೧೩. ಸಮುದಾಯ ಸಂಘರ್ಷ : ಸಂ. ಎಸ್. ಶ್ರೀಕಾಂತ್,
ಗ್ರಾಮಾಭಿವೃದ್ಧಿ ಸ್ವಯಂಸೇವಾ ಸಂಸ್ಥೆಗಳ
ಒಕ್ಕೂಟ-ಕರ್ನಾಟಕ, ೨೦೦೦

೧೪. ಗ್ರಾಮದೇವತೆಗಳು : ಡಾ. ಸಿದ್ಧಲಿಂಗಯ್ಯ, ಮೂಲಭಾರತಿ ಪ್ರಕಾಶನ, ಬೆಂಗಳೂರು, ೧೯೯೭

೧೫. ಜನಸಂಸ್ಕೃತಿ : ಡಾ. ಸಿದ್ಧಲಿಂಗಯ್ಯ, ಪ್ರಸಾರಾಂಗ, ಹಂಪಿ ವಿ.ವಿ., ೨೦೦೭.

೧೬. ದಲಿತರು ಮತ್ತು ಭೂಮಿಯ ಪ್ರಶ್ನೆ : ಡಾ. ಬಿ.ಎಂ. ಪುಟ್ಟಯ್ಯ, ಪ್ರಸಾರಾಂಗ, ಹಂಪಿ ವಿ.ವಿ. ಮಂಟಪ ಮಾಲೆ-೧೬೧. ೨೦೦೮

೧೭. ಕನ್ನಡ ಸಾಹಿತ್ಯ ಕೋಶ : ಸಂ. ರಾಜಪ್ಪ ದಳವಾಯಿ, ಕದಿರು ಪ್ರಕಾಶನ, ೨೦೦೩

೧೮. ಬಿ. ಬಸವಲಿಂಗಪ್ಪ ಮತ್ತು ಬೂಸಾ ಚಳುವಳಿಯ : ಸಂ. ಲಕ್ಷ್ಮೀನಾರಾಯಣ ನಾಗವಾರ

೧೯. ಭಾರತೀಯ ಸಮಾಜ ಮತ್ತು ದಲಿತರು : ಡಾ. ಎನ್. ಚಿನ್ನಸ್ವಾಮಿ ಸೋಸಲೆ ಪ್ರಸಾರಾಂಗ, ಹಂಪಿ ವಿ.ವಿ. ೨೦೦೮

೨೦. ವಿಚಾರ ಸಾಹಿತ್ಯ-೨ : ಸಂ. ಕೆ.ವಿ. ನಾರಾಯಣ, ಪ್ರಸಾರಾಂಗ, ಬೆಂಗಳೂರು ವಿ.ವಿ. ೧೯೮೦

೨೧. ವಿಚಾರ ಸಾಹಿತ್ಯ-೨೦೦೪ : ಸಂ. ಡಾ. ಎಸ್. ಮಾರುತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೬.

೨೨. ವಿಚಾರ ಸಾಹಿತ್ಯ-೨೦೦೬ : ಸಂ. ಎಚ್.ಟಿ. ಪೋತೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೭.

೨೩. ಸಾಹಿತ್ಯ ವಿಮರ್ಶೆ -೨೦೦೬ : ಸಂ. ಬಿ.ಎಸ್. ನಾಗರತ್ನ ಕುಮಾರಿ ಕನಾಟಕ ಸಾಹಿತ್ಯ ಅಕಾಡೆಮಿ, ೨೦೦೮.

೨೪. ಸಂವಾದ ಮಾಸಪತ್ರಿಕೆ : ಸಂ. ಇಂದೂಧರ ಹೊನ್ನಾಪುರ ಸೆಪ್ಟೆಂಬರ್ ೨೦೦೯.

೨೫. ವಿಜಯಕರ್ನಾಟಕ ದಿನಪತ್ರಿಕೆ : ಪಂಚಪ್ರಶ್ನೆ, ೨೬ ಜೂನ್ ೨೦೦೯

